ಜನಪ್ರಿಯ ಕಲಾಮಾಲಿಕೆ

# ಪೋಸ್ಟ್ ಮಾಡರ್ನಿಸಂ

ನೇಮಿರಾಜ ಶೆಟ್ಟಿ




ಕರ್ನಾಟಕ ಲಲಿತಕಲಾ ಅಕಾಡೆಮಿ

# ಪೋಸ್ಟ್ ಮಾಡರ್ನಿಸಂ

ನೇಮಿರಾಜ ಶೆಟ್ಟಿ



ಕರ್ನಾಟಕ ಲಲಿತಕಲಾ ಅಕಾಡೆಮಿ
ನೃಪತುಂಗ ರಸ್ತೆ, ಬೆಂಗಳೂರು-560 002

**POST MODERNISM** *by Nemiraja Setty*
*Published by K. Mukundan, Registrar*
*Karnataka Lalithakala Academy*
*Nrupatunga Road, Bangalore-560 002*

First Impression : 1995

**ಬೆಲೆ : ರೂ. 5-00**

ಮುಖಚಿತ್ರ : **ನೇಮಿರಾಜ ಶೆಟ್ಟಿ**

ಸಂಪಾದಕರು : **ಎಚ್. ಎ. ಅನಿಲಕುಮಾರ್**

ಮುದ್ರಣ
**ಲಕ್ಷ್ಮಿ ಮುದ್ರಣಾಲಯ**
ಚಾಮರಾಜಪೇಟೆ, ಬೆಂಗಳೂರು-18
ದೂರವಾಣಿ: 6618752, 6613123

# ಒಂದು ಮಾತು

ಕರ್ನಾಟಕ ಲಲಿತಕಲಾ ಅಕಾಡೆಮಿಯು ಇದುವರೆಗೆ ಕಲೆ ಮತ್ತು ಕಲಾವಿದರಿಗೆ ಸಂಬಂಧಿಸಿದಂತೆ ಅನೇಕ ಪುಸ್ತಕಗಳನ್ನು ಪ್ರಕಟಿಸುತ್ತಾ ಬಂದಿದೆ. ಪ್ರಸ್ತುತ ಅಕಾಡೆಮಿಯು ಜನಪ್ರಿಯ ಕಲಾ ಮಾಲಿಕೆಯಡಿಯಲ್ಲಿ ಸುಲಭ ದರದಲ್ಲಿ ಜನಸಾಮಾನ್ಯರಿಗೂ ಕಲೆಯು ಅರ್ಥವಾಗಲಿ ಎಂಬ ಉದ್ದೇಶದಿಂದ ದೃಶ್ಯಕಲೆ, ಕಲೆಯ ರಸಸ್ವಾದನೆ, ಕಲಾ ಪಂಥಗಳು ಈ ವಿಷಯವಾಗಿ ಕಿರು ಪುಸ್ತಕಗಳನ್ನು ಹೊರತರುತ್ತಿದೆ.

ಈ ಮಾಲಿಕೆಯ ಪುಸ್ತಕಗಳನ್ನು ಓದುವುದರಿಂದ ಜನಸಾಮಾನ್ಯರಲ್ಲಿ ಕಲಾ ಇತಿಹಾಸವನ್ನು ಪರಿಚಯಿಸುತ್ತಾ ಕಲಾಕೃತಿಯನ್ನು ನೋಡಿ, ಗ್ರಹಿಸಿ, ರಸಸ್ವಾದನೆ ಮಾಡಿ ಗುಣ ಮೌಲ್ಯಗಳ ಬಗ್ಗೆ ಹೆಚ್ಚಿನ ಆಸಕ್ತಿಯನ್ನು ಹೊಂದಿ ಉತ್ತಮ ಗುಣ ಮೌಲ್ಯವುಳ್ಳ ಕಲಾಕೃತಿಯನ್ನು ಸಂಗ್ರಹಿಸುವಲ್ಲಿ ಆಸಕ್ತಿ ಮೂಡುತ್ತದೆಯೆಂಬ ಆಶಯ ನಮ್ಮದಾಗಿದೆ.

ಈ ಮಾಲಿಕೆಯಲ್ಲಿ ಪುಸ್ತಕಗಳನ್ನು ಚಿತ್ರಯಾತ್ರೆಯ ಸಂದರ್ಭದಲ್ಲಿ ಹೊರತರುತ್ತಿರುವುದು ಔಚಿತ್ಯಪೂರ್ಣವಾಗಿದೆ. ಚಿತ್ರಯಾತ್ರೆಯು ನಾಡಿನಾದ್ಯಂತ ಸಂಚರಿಸುವಾಗ ಎಲ್ಲಾ ಪುಸ್ತಕಗಳು ನಾಡಿನ ಮೂಲೆ ಮೂಲೆಗೂ ತಲುಪಬೇಕೆಂಬುದು ನಮ್ಮ ಉದ್ದೇಶವಾಗಿದೆ. ಈ ಮಾಲಿಕೆಯಲ್ಲಿ ಬರೆದಿರುವ ಲೇಖಕರೆಲ್ಲರೂ ಸಂಬಂಧಪಟ್ಟ ವಿಷಯದಲ್ಲಿ ಪರಿಣತರೇ ಆಗಿದ್ದಾರೆ. ನಮಗೆ ಅತ್ಯಂತ ಕಡಿಮೆ ಅವಧಿಯಲ್ಲಿ ಈ ಕಿರುಹೊತ್ತಿಗೆಗಳನ್ನು ಬರೆದುಕೊಟ್ಟ ಕಲಾ ಲೇಖಕರಿಗೆ ಆಭಾರಿಯಾಗಿದ್ದೇವೆ. ನಮ್ಮ ಈ ಪ್ರಯತ್ನವನ್ನು ಕಲಾವಿದರೂ, ಕಲಾಸಕ್ತರೂ ತುಂಬು ಹೃದಯದಿಂದ ಸ್ವಾಗತಿಸಿ ಪ್ರೋತ್ಸಾಹಿಸುತ್ತಾರೆಂದು ನಂಬಿದ್ದೇವೆ.

**ಸಿ. ಚಂದ್ರಶೇಖರ**
ಅಧ್ಯಕ್ಷರು

# 'ಪೋಸ್ಟ್ ಮಾಡರ್ನಿಸಂ'

## (ಆಧುನಿಕೋತ್ತರ ಕಲೆಯ ಸಂಕ್ಷಿಪ್ತ ಸಮೀಕ್ಷೆ)

### I

ಕಲಾಕ್ರಿಯೆ ನಿಂತನೀರಲ್ಲ. ಹರಿಯುತ್ತಿರುವ ನದಿ. ನದಿಯು ಚಲನೆಯ ಸಂಕೇತ. ಚಲನೆ ಜೀವಂತಿಕೆಯ ಪ್ರತೀಕ. ಬೆಟ್ಟದ ಮೇಲೆ ಹುಟ್ಟುವ ನದಿಯು ತಗ್ಗು ಪ್ರದೇಶಗಳನ್ನು ಅರಸುತ್ತಾ ಹರಿಯುವಂತೆ, ದಿಕ್ಕುಗಳನ್ನು ಬದಲಾಯಿಸುವಂತೆ, ನಾಡು-ಕಾಡು-ಪಟ್ಟಣಗಳಿಗೆ ತನ್ನ ಅಗತ್ಯವನ್ನು ಸಾರುತ್ತಾ ನಿರಾತಂಕವಾಗಿ ಸಾಗುವಂತೆ, ಅವುಗಳ ಜೀವಾಂಗವಾಗುವಂತೆ, ತೊರೆಗಳನ್ನು ಹಲವು ಚಿಕ್ಕಪುಟ್ಟ ನದಿಗಳನ್ನು ತನ್ನೊಳಗೆ ಸೇರಿಸಿಕೊಳ್ಳುತ್ತಾ ತಾನು ಹಿಗ್ಗುತ್ತಾ, ಬೇಸಿಗೆಯಲ್ಲಿ ಬತ್ತಿಹೋಗುತ್ತಾ, ಮಳೆಗಾಲದಲ್ಲಿ ಆಕ್ರಮಣಕಾರಿಯಾಗುತ್ತ, ಆಡುತ್ತ-ಓಡುತ್ತ ವಿಶಾಲವಾದ ಸಮುದ್ರವನ್ನು ಸೇರುತ್ತದೆ. ಹಾಗೆ ಕಲಾಕ್ರಿಯೆಯೂ ಸಂಸ್ಕೃತಿ-ಪರಂಪರೆ ಎಂಬ ಅಗಾಧವಾದ ಅವಕಾಶದಲ್ಲಿ ವಿಲೀನವಾಗುತ್ತದೆ.

ಬದಲಾವಣೆ ಬೆಳವಣಿಗೆಯನ್ನು ನಿರ್ಧರಿಸುತ್ತದೆ. ಕಾಲಕಾಲಕ್ಕೂ, ಹಂತಹಂತಕ್ಕೂ ಬದಲಾಗುವ ನದಿಯಂತೆ-ಮಾನವನ ಭೌತಿಕ ವಿಕಾಸದಂತೆ, ಬುದ್ಧಿಯು ವಿಕಾಸವಾಗುವಂತೆ-ಕಲಾವಿಕಾಸಕ್ಕೂ ಬದಲಾವಣೆಯೇ ತಳಹದಿ. 'ಕಲೆ ಮಾನವನ ನಾಗರೀಕತೆಯ ಕುರುಹು. ಅಭಿವ್ಯಕ್ತಿ ಪ್ರಕ್ರಿಯೆಯ ಮೂಲ ಸ್ವರೂಪ, ಪ್ರಕೃತಿದತ್ತ ಮಾನವೀಯ ಗುಣಗಳನ್ನು ರೂಪಿಸುವ ಪರಿಕ್ರಮ'. ಪರಿಸರದ ಜತೆ-ಕಲ್ಲು, ಮಣ್ಣು, ನೆಲ, ಜಲ, ಮರ, ಕಾಡು, ಬೆಂಕಿ, ಗಾಳಿ ಇತ್ಯಾದಿ ಸ್ಪಂದಿಸಲು ಕಲಿತುಕೊಂಡ ಮಾನವ ತನ್ನ ಸಂತೋಷಕ್ಕಾಗಿ ಅನುಭವಗಳನ್ನು ಅನುಭಾವವನ್ನಾಗಿಸುವ ಸ್ಥಿತ್ಯಂತರ ಕ್ರಿಯೆಯಲ್ಲಿ ತನ್ನನ್ನು ತೊಡಗಿಸಿಕೊಳ್ಳುವನು.

ಮಾನವ ನಡೆಸುವ ಎಲ್ಲಾ ಕ್ರಿಯೆಯ ಹಿಂದೆಯೂ ಒಂದು ಉದ್ದೇಶವಿರುತ್ತದೆ. ಅದು ವೈಯಕ್ತಿಕವಿರಬಹುದು, ಸಾರ್ವತ್ರಿಕವಿರಬಹುದು, ಸಾರ್ವಕಾಲಿಕವಿರಬಹುದು-ಇದು ವ್ಯಕ್ತಿಯಿಂದ ವ್ಯಕ್ತಿಗೆ, ಸಮಾಜದಿಂದ ಸಮಾಜಕ್ಕೆ, ಕಾಲದಿಂದ ಕಾಲಕ್ಕೆ ಪರಿವರ್ತನೆಗೊಳಗಾಗುವ ಉದ್ದೇಶ. ಅಂತೆಯೇ ವ್ಯಕ್ತಿ-ವ್ಯಕ್ತಿಯ ಮಧ್ಯೆ ಇರುವ ಸಂಬಂಧ, ಸಮಾಜ - ಸಮಾಜದ ಮಧ್ಯೆ ರೂಪುಗೊಳ್ಳುವ ಬಾಂಧವ್ಯ, ಕಾಲ ಕಾಲದ ನಡುವೆ ಬೆಳೆಯುವ ಕೊಂಡಿ-ಬಿಂದು ಇನ್ನೊಂದನ್ನು ರೂಪಿಸುತ್ತದೆ. ಒಂದರಿಂದ ಇನ್ನೊಂದರ ಉದ್ದೇಶ ಸಾಧಿಸಲ್ಪಡುತ್ತದೆ. ಒಂದು ಇನ್ನೊಂದರ ಮಿಲನ ಮೂರನೇಯದರ ಹುಟ್ಟಿಗೆ ಕಾರಣವಾಗುತ್ತದೆ ಇದು ಕಲಾಇತಿಹಾಸದ ಮೂಲಕ ಒಮ್ಮೆ ಕಣ್ಣು ಹಾಯಿಸಿದಾಗ ಸ್ತುತ್ಯವಾಗುವ ವಿಚಾರ.

ಇತಿಹಾಸ ಪೂರ್ವದಲ್ಲಿ ಗುಹೆಗಳಲ್ಲಿ ವಾಸಿಸುತ್ತಿದ್ದ ಸಮಾಜಕ್ಕೂ, ಕಲ್ಲುಬಂಡೆಗಳ ಮೇಲೆ ಅವರು ಸೃಷ್ಟಿಸಿದ ಕಲಾಕೃತಿಗಳಿಗೂ, ಇಂದಿನ ಆಧುನಿಕ ಸಮಾಜ ವ್ಯವಸ್ಥೆಗೂ ತಲತಲಾಂತರಗಳ ಅನುಭವವೇದ್ಯವಿದೆ. ಜೀವನಾನುಭವವಿದೆ. ಆದ್ದರಿಂದ ಅಂದಿಗೂ ಇಂದಿಗೂ ನಡುವೆ ಇರುವ ಕೊಂಡಿ ವಿಕಾಸವನ್ನು ಸೂಚಿಸುತ್ತದೆ. ಬದಲಾವಣೆಯನ್ನು, ಬದಲಾವಣೆಯ ಮೂಲಕ ಬೆಳವಣಿಗೆಯನ್ನು ನಿರ್ಧರಿಸುತ್ತದೆ. ಆಗ ಕಲಾಕೃತಿಯೊಂದು 'ಸಾಕ್ಷಿ' ಎನ್ನಿಸುತ್ತಾ ಅಭೇದ್ಯವಾಗುತ್ತದೆ. ಕಲಾಕೃತಿಗಳು ದಾಖಲುಗಳಾಗಿ ಅವುಗಳ ಸಹಕಾರದಿಂದ ನಾವು ಪ್ರಾಚೀನರ, ಆಧುನಿಕರ ಜೀವನಕ್ರಮವನ್ನು, ಸಮಾಜ ವ್ಯವಸ್ಥೆಯನ್ನು, ಧಾರ್ಮಿಕ ರೀತಿ-ರಿವಾಜುಗಳನ್ನು ತಿಳಿದುಕೊಳ್ಳುತ್ತೇವೆ.

ಪ್ರಾಚೀನ ಮಾನವ ತನ್ನ ಪರಿಮಿತಿಯೊಳಗೆ ಸ್ವತಂತ್ರ. ಆದರೆ ತನ್ನ ಸುತ್ತ ಯಾವುದೇ ನಿಖರ ಚೌಕಟ್ಟನ್ನು ಹಾಕಿಕೊಳ್ಳದೆ ಜೀವಿಸಿದ್ದ. ಆತ ಸೃಷ್ಟಿಸಿದ ಕಲೆಗೂ ಒಂದು ಪರಿಮಿತಿ ಇದೆ. ಆದರೆ ಆತನ ಕೃತಿಗಳು 'ಚೌಕಟ್ಟು' ಎಂಬ ಮಿತಿಯನ್ನು ಅನುಸರಿಸದೆ ಕಲ್ಪನಾತೀತವಾಗಿ ಬೆಳೆದ ಕ್ರಿಯೆ. ಅತ್ತ-ಇತ್ತ ಸಿಕ್ಕಷ್ಟು ಜಾಗದಲ್ಲಿ ಬೇರುಬಿಡುತ್ತ, ಚಾಲನೆಗೆ ಒಳಗಾಗುತ್ತ ಈ ಕ್ರಿಯೆ ತನಗರಿವಿಲ್ಲದ ಅವಕಾಶ ಯೋಜನೆಯೊಂದರಲ್ಲಿ ಆಕಾರ ಪಡೆಯುತ್ತದೆ.

ಹಾಗೆಯೇ, ಈಜಿಪ್ಟ್ ನಾಗರೀಕತೆಯನ್ನು ಪರಾಮರ್ಶಿಸಿದಾಗ, ಅವರು ಮುಂದಿನ ಪೀಳಿಗೆಗೆಂದು ಬಿಟ್ಟುಹೋದ ಕಲಾಕೃತಿಗಳನ್ನು ಪರೀಕ್ಷಿಸಿದಾಗ, ಅಂದಿನ ಕಲಾವಿದನಿಗಿದ್ದ ವೈಜ್ಞಾನಿಕ ದೃಷ್ಟಿಕೋನದ ಅರಿವಾಗುತ್ತದೆ. ಈಜಿಪ್ಟ್ ಕಲಾಕೃತಿಗಳು ಒಂದು ಪೂರ್ವ ನಿರ್ಧರಿತ ಚೌಕಟ್ಟಿನೊಳಗೇ ವಿಕಾಸಗೊಂಡರೆ, ರೇಖೆಗಳು ರೇಖಾಗಣಿತದ ಮಿತಿಯನ್ನು ಬಳಸಿಕೊಳ್ಳುತ್ತವೆ. ಇಲ್ಲಿ ಕಲಾವಿದ ಜೈವಿಕ ಪದಾರ್ಥಗಳಿಗೆ ಜ್ಯಾಮಿತಿಯ ಆಕಾರ ಕೊಡುತ್ತಾನೆ. ಈಜಿಪ್ಟ್ ಸಂಸ್ಕೃತಿಯಲ್ಲಿ ಸಮಾಜ ವ್ಯವಸ್ಥೆ, ರಾಜಕೀಯ ವ್ಯವಸ್ಥೆ ಹೇಗೆ ಪಿರಮಿಡ್‌ಗಳ ಆಕೃತಿಯನ್ನು ಪಡೆಯುತ್ತದೆಯೋ, ಕಲೆಯೂ ಅದೇ ತತ್ವವನ್ನು ಅನುಸರಿಸುತ್ತದೆ. ಇದೇರೀತಿ ಮುಂದೆ ಹುಟ್ಟಿಬೆಳೆದ ಪಾಶ್ಚಾತ್ಯ ಕಲಾಪ್ರಕಾರಗಳಾದ ಗ್ರೀಕ್, ರೋಮನ್, ಕ್ರಿಶ್ಚಿಯನ್, ಗೋಥಿಕ್, ರೆನಾಯಸೆನ್ಸ್ ಹಾಗು ತದನಂತರದ ಆಧುನಿಕ ಯುಗ-ಯಾವುದೋ ವಿಭಿನ್ನ ಪೂರ್ವಯೋಜಿತ ಉದ್ದೇಶಗಳ ಪ್ರತಿಬಿಂಬವೆನ್ನಿಸುತ್ತದೆ.

ಭಾರತೀಯ, ಪೌರಾತ್ಯ ಕಲೆಯೂ ಇದರಿಂದ ಹೊರತಲ್ಲ. ಮೌರ್ಯರ ಕಾಲದ ಶಿಲ್ಪಕೃತಿಗಳು, ಗುಪ್ತರ ಶಿಲ್ಪಗಳು; ಅಂಜತಾ, ಜೈನ, ಮೊಗಲರ ಚಿತ್ರಕಲೆಗಳೂ ಇಂತಹ ಪೂರ್ವಯೋಜಿತ ಉದ್ದೇಶಗಳಿಂದಲೇ ಕೃತ್ಯವಾಗಿರುವುದು. ಸಾರ್ತ್ರ್ ಹೇಳುವಂತೆ 'ನಿಶ್ಚಯ' ಹಾಗು 'ಕ್ರಿಯೆ' ಇಲ್ಲಿ ಪ್ರಮುಖ ಪಾತ್ರವಹಿಸುತ್ತದೆ.

# II

'ಮಾಡರ್ನ್' ಅಂದರೆ 'ಆಧುನಿಕ', 'ನವ್ಯ'. 'ಮಾಡರ್ನಿಸಂ' ಅಂದರೆ 'ಆದುನಿಕತೆ'. ಈ ಆಧುನಿಕತೆಯ ಪರಿಕಲ್ಪನೆ ಪಾಶ್ಚಾತ್ಯರದ್ದು. ಪಾಶ್ಚಾತ್ಯ ಕಲೆಯಲ್ಲಿ 'ಆಧುನಿಕತೆ'ಯು ಕಾಲಿರಿಸಿದ್ದು ಧರ್ಮಾಂಧತೆಯಲ್ಲಿ ಬೆಸೆದುಹೋಗಿದ್ದ ಮಧ್ಯಯುಗಾನಂತರ ರೆನಾಯಸೆನ್ಸ್ (Renaissance) ಕಲೆಯ ಮೂಲಕ- ಇಟಲಿಯ ಫ್ಲೋರೆನ್ಸ್ ನಗರದಲ್ಲಿ. ಪುನರುಜ್ಜೀವನ ಕಲೆಯ ವಕ್ತಾರರಾದ ಜಿಯೊತೊ, ಮಸ್ಸಾಚಿಯೋ ಮೂಲದಿಂದ ಲಿಯನಾರ್ಡೊ, ಮೈಕೆಲೇಂಜೆಲೋರಿಂದ ಪರಾಕಾಷ್ಟೆಗೆ ತಲುಪಿ, ನಂತರ ಇಪ್ಪತ್ತನೆಯ ಶತಮಾನದವರೆಗಿನ ಕಾಲ. ಇನ್ನೊಂದೆಡೆ ಕಲಾ ಇತಿಹಾಸದ ವಿಂಗಡಣೆಗೆ ಅನುಕೂಲವಾಗುವಂತೆ ಹತ್ತೊಂಬತ್ತು ಮತ್ತು ಇಪ್ಪತ್ತನೆಯ ಶತಮಾನಗಳ ಕಲಾ ಬೆಳವಣಿಗೆಯನ್ನೂ ಆಧುನಿಕವೆಂದಿದ್ದಾರೆ. ಈ ಎರಡು ಶತಮಾನಗಳಲ್ಲಿ ಪಾಶ್ಚಾತ್ಯ ಕಲೆಯು 'ಇಸಂ'ಗಳ ಆಧಾರದಲ್ಲಿ ವೈಯಕ್ತಿಕ ನೆಲೆಯಲ್ಲಿ ಬಹಳಷ್ಟು ಬದಲಾವಣೆಗಳನ್ನು ಕಂಡಿದ್ದು 'ರೆನಸೆನ್ಸ್' (Renaissance) ಎಂಬ ತಾತ್ವಿಕ ನೆಲೆಗೆ ವೈವಿಧ್ಯ ಸ್ವರೂಪಗಳನ್ನು ಅಳವಡಿಸಿಕೊಂಡ ಕಾಲ.

ರೆನಸೆನ್ಸ್ ಯುಗವು ವ್ಯಕ್ತಿ ಸ್ವಾತಂತ್ರ್ಯಕ್ಕೆ ಪ್ರಾಧಾನ್ಯತೆ ಕೊಟ್ಟಿತು. ಇದು ವಿಚಾರ ಸ್ವಾತಂತ್ರ್ಯಕ್ಕೆ ಬುನಾದಿ ಹಾಕಿದ ಕಾಲ. ಮಾನವ ತನ್ನಲ್ಲಿದ್ದ ಕುತೂಹಲಗಳಿಗೆ ವೈಜ್ಞಾನಿಕವಾಗಿ ಉತ್ತರ ಕಂಡುಕೊಂಡದ್ದು, ತಿಳಿದುಕೊಳ್ಳಬೇಕೆಂಬ ಆಶೆಯನ್ನು ಹತ್ತಿಕ್ಕದೆ ಅದಕ್ಕಾಗಿ ಕಾರ್ಯನಿರತನಾಗಿದ್ದು ಇದೇ ಕಾಲದಲ್ಲಿ. ಈ ಕಾರಣದಿಂದಲೇ 'ಮೊನಾಲಿಸ' 'ಸ್ಕೂಲ್ ಆಫ್ ಅಥೆನ್ಸ್', 'ಡೇವಿಡ್' ನಂತರ 'ನೈಟ್‌ವಾಚ್' ನಂತಹ ಅಮೂಲ್ಯ ಕೃತಿಗಳ ಹುಟ್ಟಿಗೆ ಕಾರಣವಾಯಿತು. ಆ ವೇಳೆಗೆ ಕಲಾವಿದರು ವೈಜ್ಞಾನಿಕ ತಳಹದಿಯನ್ನಿಟ್ಟು ಸೃಷ್ಟಿಸಿದ್ದು ಚಿತ್ರಕಲೆಯಲ್ಲಿ ಮೂರನೇ ಆಯಾಮದ ಪರಿಕಲ್ಪನೆ, ಯಥಾದೃಷ್ಟರೂಪಣ, ಆಕೃತಿಗಳ ಸುತ್ತ ವಾತಾವರಣ ನಿರ್ಮಿಸುವ, ಬೆಳಕಿನ, ಗಾಳಿಯ ಪ್ರಾಮುಖ್ಯತೆಯನ್ನು ಸಾರುವ, ಅದನ್ನು ಚಿತ್ರಭಾಷೆಯಲ್ಲಿ ಅಳವಡಿಸಿಕೊಳ್ಳುವ, ಹಿಂದೊಮ್ಮೆ ರೋಮನರು ಪ್ರಯತ್ನಿಸಿ ಕೈಬಿಟ್ಟ ಕ್ರಮವೊಂದನ್ನು ಕಂಡುಕೊಂಡು, ನೈಜಲೋಕದ ಭ್ರಮೆಯೊಂದನ್ನು ನಮ್ಮ ಮುಂದಿಟ್ಟರು.

ಈ ತತ್ವವನ್ನು ಮೊಟ್ಟಮೊದಲ ಬಾರಿಗೆ ಗಾಳಿಗೆ ತೂರಿದವನು ಪ್ಯಾಬ್ಲೊಪಿಕಾಸೊ. ತನ್ನ 'ಆವಿಗ್ನಾನ್ ನಗರದ ಹೆಣ್ಣುಗಳು' (1907) ಎಂಬ ಕೃತಿಯಲ್ಲಿ. ರೆನಸೆನ್ಸ್ ಕಲಾವಿದರು ಕಷ್ಟಪಟ್ಟು ಸೃಷ್ಟಿಸಿದ ಭ್ರಮಾಲೋಕಕ್ಕೆ, ಸೌಂದರ್ಯದ ಕಲ್ಪನೆಗೆ ಈ ಕೃತಿಯ ಮೂಲಕ ಅರ್ಧ ವಿರಾಮ ಹಾಕುತ್ತಾನೆ. ಪಿಕಾಸೋ-ಬ್ರಾಖ್ ಎಂಬ ಎರಡು ಮಿದುಳುಗಳು ಒಂದಾಗುತ್ತವೆ. 'ಕ್ಯೂಬಿಸಂ' ಹುಟ್ಟಿಕೊಳ್ಳುತ್ತದೆ. ಇಲ್ಲಿ ಕ್ಯೂಬಿಸಂ ಕೇವಲ ಚಿತ್ರಭಾಷೆಯಾಗದೆ ಒಂದು ತತ್ವವಾಗಿ, ತಾತ್ವಿಕ ನೆಲೆಯಲ್ಲಿ ಇಪ್ಪತ್ತನೆ ಶತಮಾನವೆಂಬ ಅತ್ಯಾಧುನಿಕ ಯುಗವನ್ನು ತನ್ನ ಕೈಗೆತ್ತಿಕೊಳ್ಳುತ್ತದೆ. ಸಾಂಸ್ಕೃತಿಕ ಭಾಷೆಯಾಗಿ ಉಳಿದೆಲ್ಲಾ ಕಲಾಪ್ರಕಾರಗಳಿಗೂ

ಪ್ರಭಾವ ಬೀರುತ್ತದೆ. ಪ್ರಸಿದ್ಧ ಕಲಾ ಇತಿಹಾಸಕಾರ ರಾಬರ್ಟ್ ಮದರ್ವೆಲ್ಲನ ಪ್ರಕಾರ ಪಿಕಾಸೊ ಹಾಗೂ ಬ್ರಾಖ್ ಪ್ರಪ್ರಥಮ 'ಆಧುನಿಕೋತ್ತರರು'. ಅಂದರೆ **'ಪೋಸ್ಟ್ ಮಾಡರ್ನಿಸ್ಟ್'**ಗಳು. ಇವರು ಕಲಾವಿದರ 'ಕೆಫೆ' ಹಾಗೂ 'ಸ್ಟುಡಿಯೋ' ಜೀವನಕ್ಕೆ ಅಂತ್ಯ ತಂದುಕೊಟ್ಟವರು. ಕೃತಿರಚನೆಗೆ ಸಂಬಂಧಿಸಿ ಒಂದು ಮಿತಿಯಲ್ಲಿ ವಿವಿಧ ವಸ್ತುಗಳನ್ನು ಮಾಧ್ಯಮಗಳನ್ನಾಗಿ ಬಳಸುವ ಇವರು ನಿಜ, ವಾಸ್ತವಿಕ ಲೋಕವೊಂದನ್ನು ಆಧುನಿಕತೆಯ ಪರಿಕಲ್ಪನೆಯಲ್ಲಿ ಒಪ್ಪಿಕೊಳ್ಳುತ್ತಾರೆ. ಮದರ್ವೆಲ್ಲನು ಮುಂದುವರಿಯುತ್ತ, ಆಧುನಿಕತೆ ಎನ್ನುವುದು ಸರ್ವವ್ಯಾಪಿ ಎನ್ನುತ್ತಾನೆ. ಅದು ಸಮಷ್ಟಿ ಪ್ರಜ್ಞೆಯನ್ನು ಒಳಗೊಂಡಿರುವುದಲ್ಲದೆ ಕೇವಲ ಮಾನವೀಯತೆ, ಮಾನವ ಪ್ರಜ್ಞೆಗೆ ಸೀಮಿತವಾಗಿಲ್ಲ ಎಂದು ಆತನ ಅಭಿಮತ. ಅದೇ ಸ್ಯೂರಾ, ಸೆಜಾನ್, ಕ್ಯೂಬಿಸ್ಟ್ ಕೊಲಾಜ್‌ಗಳು ಪ್ರಪಂಚದ ವಾಸ್ತವಿಕತೆಯನ್ನು ನೋಡುವುದಕ್ಕೆ ಸಹಕರಿಸುತ್ತದೆ ಎನ್ನುತ್ತಾನೆ. ಅಂದರೆ ಲೋಕವನ್ನು, ಪರಿಸರವನ್ನು ವಸ್ತುರೂಪವಾಗಿ ನೋಡುವ 'ಪ್ರಾಮಾಣಿಕ' ಕ್ರಮವೊಂದನ್ನು ಆಧುನಿಕೋತ್ತರರು ಕಂಡುಕೊಂಡಿದ್ದಾರೆ.

ಇಪ್ಪತ್ತನೇ ಶತಮಾನದ ಎಲ್ಲಾ ಕಲಾ ಚಳವಳಿಗಳಿಗೂ ಹತ್ತೊಂಬತ್ತನೇ ಶತಮಾನದ ಕಲಾವಿದರೇ ಅಡಿಗಲ್ಲು ಹಾಕಿರುವುದು. ಒಂದೆಡೆ ಎಡ್ವರ್ಡ್ ಮಾನೆ(Manet)ಯು ತನ್ನ ಕೃತಿ 'ದ ಫ್ಲೈಪರ್'(1866) ಮೂಲಕ ಸಮಪಾತಳಿಯಲ್ಲಿ ಬಣ್ಣಗಳನ್ನು ಉಪಯೋಗಿಸುವ ನವೀನ ಚಳವಳಿಗೆ ನಾಂದಿ ಹಾಕುತ್ತಾನೆ. ಬಣ್ಣಗಳನ್ನು ಬೆಳಕಾಗಿ ಯೋಚಿಸುವ ಬದಲು, ಬಣ್ಣಗಳನ್ನು ಬಣ್ಣಗಳಾಗಿಯೇ ನೋಡುವ ಹೊಸ ದೃಷ್ಟಿಕೋನವೊಂದನ್ನು ಯುರೋಪಿಯನ್ ಕಲೆಗೆ ಅಳವಡಿಸಿಕೊಳ್ಳುತ್ತಾನೆ. (ಭಾರತೀಯ ಸಾಂಪ್ರದಾಯಿಕ ಕಲೆಯಲ್ಲಿ ಮತ್ತು ಜಪಾನೀ ಅಚ್ಚುಕಲೆಯಲ್ಲಿ ಇದೇನು ಹೊಸತಲ್ಲ). ಈ ಶೈಲಿಯನ್ನು ಎಮಿಲ್ ಬೊನಾರ್ಡ್ ಹಾಗೂ ಪಾಲ್ ಗೋಗಾನ್ ತಮ್ಮ ಕೃತಿಗಳಲ್ಲಿ ನಿಚ್ಚಳವಾಗಿ ತೋರಿಸುತ್ತಾ ಬಣ್ಣ-ರೂಪಗಳನ್ನು ರೇಖೆಗಳ ಮೂಲಕ ವಿಂಗಡಿಸುತ್ತಾರೆ. ನೈಜಲೋಕವನ್ನು ಬದಿಗಿಟ್ಟು, ಸಾಂಕೇತಿಕ ಲೋಕವೊಂದನ್ನು ಸೃಷ್ಟಿಸುತ್ತಾರೆ. ಸ್ಯೂರಾನ ವಿಭಜನಾವಾದವು (Divisionism) ಬಣ್ಣಗಳ ವೈವಿಧ್ಯತೆಯನ್ನು ವೈಜ್ಞಾನಿಕವಾಗಿ ಅರಿತುಕೊಳ್ಳಲು, ಬಣ್ಣಗಳ ಮೂಲಗುಣಗಳನ್ನು ಅಭ್ಯಸಿಸಲು ಸಹಕಾರಿಯಾಗುತ್ತದೆ. ವ್ಯಾನ್‌ಗೋನ ಅತಿಭಾವುಕತನ ಎಡ್ವರ್ಡ್ ಮುಂಕ್‌ನಂತಹ ಕಲಾವಿದರಿಗೆ, ಜರ್ಮನ್ ಅಭಿವ್ಯಕ್ತಿವಾದಿಗಳಿಗೆ (Expressionists) ಮತ್ತು ಇಂದು ಪ್ರಚಲಿತವಿರುವ ನಿಯೋ-ಎಕ್ಸ್‌ಪ್ರೆಸ್ಸನಿಸ್ಟ್‌ಗಳಿಗೆ ಆಧಾರವಾಗುತ್ತದೆ. ಸೆಜಾನನ ಗಣಿತ ಶಾಸ್ತ್ರ, ಜೈವಿಕ ಪದಾರ್ಥಗಳನ್ನು ಜ್ಯಾಮಿತಿಗಿಳಿಸುವ ವೈಜ್ಞಾನಿಕ ನಿಲುವು ಪಿಕಾಸೋ-ಬ್ರಾಖ್ ಮೂಲಕ ಕ್ಯೂಬಿಸಂ ಎಂಬ ಉದಾತ್ತ ತತ್ವಕ್ಕೆ ನೆಲೆಯಾಗುತ್ತದೆ. ಇದು ಇಪ್ಪತ್ತನೇ ಶತಮಾನಕ್ಕೆ ದಾರಿದೀಪವಾಗುತ್ತದೆ ಮಾತ್ರವಲ್ಲ ಈ ಎರಡೂ ಶತಮಾನಗಳ ಮಧ್ಯೆ ಬಿಡಿಸಲಾರದ ನಂಟೊಂದು ನಿರ್ಮಾಣವಾಗುತ್ತದೆ. ಹೆನ್ರಿ ರೂಸೋನಂತಹ(Rousseau) ಕಲಾವಿದನು ತನ್ನ 'ನೈವಿಟಿ' ಮೂಲಕ 'ಪ್ರಾಚೀನವಾದ'ವೊಂದನ್ನು ನಮ್ಮ ಮುಂದಿಡುತ್ತಾನೆ.

# III

'ಪೋಸ್ಟ್ ಮಾಡರ್ನಿಸಂ' ಅಥವಾ 'ಆಧುನಿಕೋತ್ತರ'(ನವ್ಯೋತ್ತರ) ಎಂಬುದು ಎಪ್ಪತ್ತನೇ ದಶಕಾನಂತರ ಯುರೋಪ್ ಮತ್ತು ಅಮೇರಿಕಾ ದೇಶಗಳಲ್ಲಿ ತಾತ್ವಿಕ ನೆಲೆಯಲ್ಲಿ ಹುಟ್ಟಿಕೊಂಡಂತಹ ವಿಚಾರಧಾರೆ. ಇದು ಸಾರ್ತ್ರ್‌ನ 'ಅಸ್ತಿತ್ವವಾದ'ದ ನಂತರ ಪ್ರಕಟವಾದ ಜಾಕ್ರೂಸ್ ಡೆರಿಡಾನ 'ಡಿ-ಕನ್‌ಸ್ಟ್ರಕ್ಸನ್ ಥಿಯರಿ', ಮೈಕೇಲ್ ಫುಕೋ(Foucault), ಜೆ.ಎಫ್. ಲ್ಯೊಟಾರ್ಡ್(Lyotard) ಮೊದಲಾದವರ ಬರಹಗಳಿಂದ 'ಪೋಸ್ಟ್ ಮಾಡರ್ನಿಸಂ' ಇತ್ತೀಚಿನ ಸಾಂಸ್ಕೃತಿಕ ನೀತಿಯಾಗಿ ಬೆಳೆದುಬಂದಿದೆ. ಈ ನೀತಿ ಕೇವಲ ಚಿತ್ರ-ಶಿಲ್ಪ ಕಲೆಗಳಿಗೆ ಸೀಮಿತವಾಗಿರದೆ ಸಾಹಿತ್ಯ, ನಾಟಕ, ವಾಸ್ತುಶಿಲ್ಪ ಇತ್ಯಾದಿ ಮಾಧ್ಯಮಗಳಲ್ಲೂ ಹರಡಿಕೊಂಡಿದೆ.

ರೀವಾ ಕ್ಯಾಸಲ್‌ಮನ್ ಪ್ರಕಾರ ಕಲೆಯು ಬೇರೆ ಕಲೆಗಳಿಗೆ ಪ್ರಭಾವ ಬೀರುತ್ತಾ ಬದುಕುತ್ತದೆ ಅಥವಾ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುತ್ತದೆ. ಅದಕ್ಕೆ ಓರ್ವ ಕಲಾವಿದನ ಕಲ್ಪನೆಯಾಗಿ, ಕಲ್ಪನಾ ಬಿಂಬವಾಗಿ, ಭೌತಿಕವಾಗಿ ಉಳಿಯುವ ಅಸ್ತಿತ್ವ ಇಲ್ಲ. ಆದುದರಿಂದ ಹಿಂದೆ ಬದುಕಿದ್ದ ಒಬ್ಬ ಕಲಾವಿದ ಮತ್ತೆ ಚೈತನ್ಯ ಪಡೆಯುವುದು ಆತನ ಕಲೆಯ ಕೆಲವು ಅಂಶಗಳು, ದೃಷ್ಟಿಕೋನಗಳನ್ನು ಮತ್ತೊಮ್ಮೆ ಉಪಯೋಗಿಸಲು, ಅಳವಡಿಸಿಕೊಳ್ಳಲು ಸಾಧ್ಯವಾಗುವುದರಿಂದ. ಇದೇ ಕಾರಣಕ್ಕಾಗಿ ಎಲ್ಲಾ ಮಹಾನ್ ಕಲಾವಿದರೂ, ಎಲ್ಲಾ ಕಾಲದಲ್ಲೂ ತಮ್ಮನ್ನು ಇತಿಹಾಸದ ಜತೆ ಗಂಟುಹಾಕಿಕೊಂಡಿರುವುದು ಏಕೆಂದರೆ, ಶೂನ್ಯದಿಂದ ಆತ ಏನನ್ನೂ ಸೃಷ್ಟಿಸಲಾರ.

ಪಾಲ್ ಕ್ರೋಥರ್ ಆಧುನಿಕ ಕಲೆಯ ಮೂಲವನ್ನು ಎರಡು ಪ್ರವೃತ್ತಿಗಳಾಗಿ ವಿಂಗಡಿಸುತ್ತಾನೆ-ಒಂದು ರೂಪಪ್ರಧಾನ(formalist),ಇನ್ನೊಂದು 'ಸ್ಪಿರಿಚ್ಯುಯಲ್' (ಆಧ್ಯಾತ್ಮಿಕ). ರೂಪ ಪ್ರಧಾನವು ವಸ್ತುನಿಷ್ಠ. ಒಂದು ವಸ್ತುವಿನ ಬಾಹ್ಯರೂಪ, ಆಕಾರ ಅಲ್ಲಿ ಪ್ರಾಮುಖ್ಯತೆ ಪಡೆದರೆ, 'ಸ್ಪಿರಿಚ್ಯುಯಲ್' ಅನ್ನುವುದು ವ್ಯಕ್ತಿನಿಷ್ಠ. ವಸ್ತುವು ಪ್ರತಿಮೆಯಾಗಿ ಕಲಾವಿದನ ಅಂತಃಸತ್ವದ ಅಭಿವ್ಯಕ್ತಿಯಾಗುತ್ತದೆ, ಪಾರಮಾರ್ಥಿಕ ಸತ್ಯವೊಂದನ್ನು ಹೊರಸೂಸುತ್ತದೆ.

'ಆಧುನಿಕೋತ್ತರ' ಪ್ರವೃತ್ತಿಯಲ್ಲಿ ಸದ್ಯದಲ್ಲಿ ಕೆಲಸ ಮಾಡುತ್ತಿರುವ ಬಹುತೇಕ ಕಲಾವಿದರು 80ನೇ ಮತ್ತು 90ನೇ ದಶಕಗಳಲ್ಲಿ ತಮ್ಮ ಪರಿಸರವನ್ನು ರೂಪಿಸಿರುವ 'ವಸ್ತು'ಗಳೊಡನೆ ನೇರವಾಗಿ ಸ್ಪಂದಿಸುತ್ತಾರೆ. ಅದರಿಂದ ವಾಸ್ತವ ಲೋಕದ ಭ್ರಮೆಯೊಂದನ್ನು ಕ್ಯಾನ್‌ವಾಸ್ ಮೇಲೆ ಸೃಷ್ಟಿಸುವ ಬದಲು ವಸ್ತುವನ್ನು ವಸ್ತುವಾಗಿಯೇ ಗುರುತಿಸುತ್ತಾ ಅದು ನಿರೂಪಿಸುವ ಪಾರಮಾರ್ಥಿಕ ಸತ್ಯವನ್ನು ಗಣನೆಗೆ ತೆಗೆದುಕೊಳ್ಳುತ್ತಾರೆ.

ಇಂತಹ ವಸ್ತುಗಳ ಬಳಕೆ ಮೊಟ್ಟಮೊದಲಬಾರಿಗೆ ಪಿಕಾಸೋ-ಬ್ರಾಖ್ ಸೃಷ್ಟಿಸಿದ 'ಸಿಂಥೆಟಿಕ್ ಕ್ಯೂಬಿಸಂ' ಮೂಲಕ ಕಲಾಲೋಕದಲ್ಲಿ ಪ್ರಚಲಿತವಾಗುತ್ತದೆ. ಮಾರ್ಷಲ್ ದುಶಾಂಪ್(Duchamp) ಇನ್ನೂ ಒಂದು ಹೆಜ್ಜೆ ಮುಂದಿಡುತ್ತಾ 'Tu'm' ಎಂಬ ಕೃತಿ(1918) ಯಲ್ಲಿ ಕ್ಯಾನ್‌ವಾಸ್‌ನ ಮೇಲೆ ವಿವಿಧ ರೀತಿಯ ಘನ (Three dimensional) ವಸ್ತುಗಳನ್ನು ಅಳವಡಿಸಿಕೊಳ್ಳುತ್ತಾನೆ. ಪುರುಷರ ಮೂತ್ರಿಕೆಯೊಂದನ್ನು ತಲೆಕೆಳಗಾಗಿ ಪ್ರದರ್ಶನಕ್ಕಿಟ್ಟು 'Fountain' ಎಂದು ಕರೆಯುತ್ತಾನೆ. ಪಾರಂಪರಿಕವಾಗಿ ಉಪಯೋಗಿಸಲ್ಪಡುತ್ತಿದ್ದ ಶಿಲ್ಪ ಮಾಧ್ಯಮಗಳನ್ನು ಕೈಬಿಡುತ್ತಾನೆ. ಶಿಲ್ಪವೆಂದರೆ 'ಹೀಗೆಯೇ ಇರಬೇಕು, 'ಹಾಗೆಯೇ ಇರಬೇಕು' ಎಂಬ ವಿಚಾರಕ್ಕೆ ಪರದೆ ಎಳೆಯುತ್ತಾನೆ. ಇನ್ನೊಂದೆಡೆ ಕ್ಯಾಂಡಿನ್‌ಸ್ಕಿಯ 'ಆರ್ಗಾನಿಕ್ ಅಬ್‌ಸ್ಟ್ರಾಕ್ಷನ್', ಮಾಂಡ್ರಿಯಾನ್‌ನ 'ಜಿಯೋಮೆಟ್ರಿಕ್ ಅಬ್‌ಸ್ಟ್ರಾಕ್ಷನ್', ವಸ್ತುವನ್ನೇ ಬಳಸದ ಅಮೂರ್ತ ಲೋಕಗಳ ನಿರೂಪಣೆಯ ಇಪ್ಪತ್ತನೇ ಶತಮಾನವನ್ನು ವೈರುಧ್ಯಗಳ ವೇದಿಕೆಯನ್ನಾಗಿಸುತ್ತದೆ.

ಇದು ಅಮೂರ್ತ ಅಭಿವ್ಯಕ್ತಿವಾದಿಗಳಿಗೆ (Abstract Expressionists) ಉಸಿರಾಡಲು ಸಾಕಷ್ಟು ಅವಕಾಶವನ್ನು ಕೊಡುತ್ತದೆ. ಜಾಕ್ಸನ್ ಪೊಲ್ಲಾಕನು 'ಕ್ರಿಯೆ' ಮತ್ತು 'ವ್ಯಕ್ತಿ' ನಡುವಣ ದೂರವನ್ನು ಇನ್ನಷ್ಟು ನಿಕಟಗೊಳಿಸುತ್ತಾನೆ. ತಾನು ಬೇರೆಯಲ್ಲ, ಕಲಾಕ್ರಿಯೆ ಬೇರೆಯಲ್ಲ ಎಂಬ ರೀತಿಯಲ್ಲಿ ಬಣ್ಣಗಳನ್ನು ಚೆಲ್ಲುತ್ತಾ, ಬಣ್ಣಗಳ ಜತೆ ಆಟವಾಡುತ್ತಾ, ಕ್ಯಾನ್‌ವಾಸ್ ಮೇಲೆ ಹೊರಳಾಡುತ್ತಾ ನಡೆಸುವ ಅನುಸಂಧಾನ ಕ್ರಿಯೆ ಒಂದೆಡೆಯಾದರೆ ರಾಬರ್ಟ್ ಕಲಾವಿದರು-ವಸ್ತುಗಳನ್ನು, ಅವುಗಳ ಗುಣಗಳನ್ನು ಮಹತ್ವಗಳನ್ನು ಮುಂದಿಡುತ್ತ, ಚಿತ್ರದ ಸಮಪಾತಳಿಯಲ್ಲಿ ಮೂರನೇ ಆಯಾಮವೊಂದನ್ನು ನಿರ್ಮಿಸುವ ಕ್ರಿಯೆ, ಚಿತ್ರ-ಶಿಲ್ಪಗಳ ಮಧ್ಯೆ ನಿರ್ದೇಶಿಸಲಾದ ಗುರುತು ರೇಖೆಯನ್ನು ಹತ್ತಿಕ್ಕುವ ಕ್ರಮವನ್ನು ಕೈಗೆತ್ತಿಕೊಳ್ಳುತ್ತಾನೆ. ಕೊಟ್ಟ ಜಾಗವನ್ನು ಬಿಟ್ಟು, ಅವಕಾಶದ ಚೌಕಟ್ಟನ್ನು ಮುರಿದು ಹೊರನಡೆಯುವ ಹುಮ್ಮಸ್ಸು ತೋರುತ್ತಾನೆ. ವಿಶಿಷ್ಟ ಅವಕಾಶ ಯೋಜನೆಯೊಂದನ್ನು ನಿರ್ಮಿಸಿಕೊಳ್ಳುತ್ತಾನೆ. ತನ್ನ ಕೃತಿಗಳಲ್ಲಿ ಮಾನವ ನಿರ್ಮಿತ ವಸ್ತುಗಳನ್ನು ಪ್ರತಿಮೆಗಳಾಗಿ ಉಪಯೋಗಿಸುವುದರ ಜತೆ-ಜತೆಗೆ 'ಸ್ಟಫ್ ಮಾಡಿರುವ ಬಾವಲಿ, ಕೋಳಿ, ಆಡು ಇತ್ಯಾದಿಗಳನ್ನು ಅಳವಡಿಸಿಕೊಳ್ಳುತ್ತ (Odalisk-1955-58, Monogram-1955-59, Canyon 1959) ನಿಜಲೋಕ ಹಾಗು ಚಿತ್ರಿತಲೋಕಗಳ ನಡುವೆ ಸಾಮ್ಯತೆ ಹಾಗು ಅಂತರ್ಬಂಧವೊಂದನ್ನು ಧ್ವನಿಸುತ್ತಾನೆ. ದಾದಾವಾದಿ ದುಷ್ಯಾಂಪನು ಒಂದು ವಸ್ತುವಿನ ಬಾಹ್ಯಗುಣಗಳನ್ನು ಹಾಳುಗೆಡಹದೇ ಬೇರೊಂದು ಉದ್ದೇಶವನ್ನು ಸಾಧಿಸಿದರೆ ರಾಷೆನ್‌ಬರ್ಗ್‌ನ ಕೃತಿಗಳಲ್ಲಿ ವಸ್ತು, ವಸ್ತುವಿನ ಪ್ರತೀಕವಾಗಿಯೇ ಉಳಿದು ಒಂದು ಗಾಢವಾದ ಭಾವವನ್ನು ಸಾದರಪಡಿಸುತ್ತದೆ.



ಹೆನ್ರಿ ಕೋರ್‌ನರ್



ಪೋಸ್ಟ್ ಮಾಡರ್ನಿಸಂ

60ನೇ ದಶಕದಲ್ಲಿ ಜೋಸೆಫ್ ಬಯ್ಸ್ (Joseph Beuys), ಜಾನ್ನಿಸ್ ಕೌನೆಲ್ಲಿಸ್ ಹಾಗೂ ಮಾರಿಯೊ ಮರ್ಜ್ಝ್ ಮೊದಲಾದ ಕಲಾವಿದರು ನಶ್ವರ ಪದಾರ್ಥಗಳ ಬಳಕೆಯನ್ನು ತಮ್ಮ ಕಲಾಕ್ರಿಯೆಯ ಭಾಗವಾಗಿ ಕೃತಿಗಳನ್ನು ರಚಿಸುತ್ತಾರೆ. ಬೃಹದಾಕಾರದ ವಸ್ತುಗಳನ್ನು ಉಪಯೋಗಿಸುವುದು, ಪರಿಸರವನ್ನೇ ಅವಕಾಶವನ್ನಾಗಿ ಮಾರ್ಪಾಟು ಮಾಡಿಕೊಳ್ಳುವುದು ಇವರು ನೀಡಿದ ನೂತನ ಬದಲಾವಣೆಗಳು.

ಜರ್ಮನ್ ಸಂಜಾತ ಬಯ್ಸ್ ಪ್ರಕಾರ ಕಲೆಯು ಸಾಮಾಜಿಕ ಹಾಗು ರಾಜಕೀಯ ಬದಲಾವಣೆಗಳನ್ನು ನಿರ್ದೇಶಿಸುವ, ಪ್ರಭಾವ ಬೀರುವ ಮಾಧ್ಯಮ ಬಯ್ಸ್ ತನ್ನನ್ನು ತಾನೇ ಒಂದು ಜೀವಂತ ಪದಾರ್ಥವಾಗಿ ಕ್ರಿಯೆಯಲ್ಲಿ ತೊಡಗಿಸಿಕೊಳ್ಳುವುದು ಸತ್ತ ಮೊಲಕ್ಕೆ ಪಾಠ ಹೇಳುವುದು ('How to explain Pictures to a Dead Hare', 1965) ಇತ್ಯಾದಿಗಳನ್ನು ತನ್ನ ಅಭಿವ್ಯಕ್ತಿ ಕ್ರಿಯೆಯಲ್ಲಿ ಅಳವಡಿಸಿಕೊಳ್ಳುತ್ತಾನೆ. ಇದನ್ನು 'ಸಂಭವಿಸುವಿಕೆ' (Happenings) ಎಂದು ಕರೆಯುತ್ತಾರೆ. ಈ 'ಸಂಭವಿಸುವಿಕೆ' 'ಪರಿಸರಗಳು' (Environments), 'ಪ್ರದರ್ಶನ ಕಲೆ'(Performance)ಗಳಿಗೂ ನಮ್ಮ ಜನಪದರು ನಡೆಸುವ ಧಾರ್ಮಿಕ ಕ್ರಿಯೆಗಳಿಗೂ ದೊಡ್ಡ ವ್ಯತ್ಯಾಸವೇನೂ ಇಲ್ಲ. ಜನಪದರದ್ದು ತಲೆತಲಾಂತರದಿಂದ ನಡೆದುಬಂದ ಪರಂಪರೆಯಾದರೆ ಆಧುನಿಕ ಕಲಾವಿದರದ್ದು ವಿಚಾರ ಮಂಡನೆ, ವೈಯಕ್ತಿಕ ಅಭಿವ್ಯಕ್ತಿ. ಬಯ್ಸ್ ನಶ್ವರ ಪದಾರ್ಥಗಳ ಬಳಕೆಯ ಮೂಲಕ ಸ್ಥಾಪನಾ ಕಲೆಗೆ (Installation) ವಿಭಿನ್ನ ಆಯಾಮವೊಂದನ್ನು ಕೊಡುತ್ತಾನೆ. ಉದಾಹರಣೆಗೆ 'Fat Chair' 1964 ಎಂಬ ಕೃತಿಯಲ್ಲಿ ಹಸಿಮಾಂಸದ ಉಪಯೋಗವಿದೆ. ಕೌನೆಲ್ಲಿಸ್‌ನು ತನ್ನ 'Untitled 1969' ಎಂಬ ಕೃತಿಯಲ್ಲಿ ಹನ್ನೆರಡು ಜೀವಂತ ಕುದುರೆಗಳನ್ನೇ ಗ್ಯಾಲರಿಯ ಒಳಗಡೆ ಕಟ್ಟಿಹಾಕುತ್ತಾನೆ.

ಈ ಮಧ್ಯೆ ಯ್ವೆಸ್ ಕ್ಲೈನ್ ಎಂಬ ಫ್ರೆಂಚ್ ಕಲಾವಿದ ಸ್ತ್ರೀ ಮಾಡೆಲ್‌ಗಳನ್ನು ಬೆತ್ತಲೆಯಾಗಿಸಿ, ನೆಲದ ಮೇಲೆ ಚೆಲ್ಲಿದ ಬಣ್ಣಗಳಲ್ಲಿ ಹೊರಳಾಡಿಸಿ ಅವರ ಮೈಯ ಪ್ರಿಂಟ್‌ಗಳನ್ನು ಕ್ಯಾನ್‌ವಾಸ್ ಮೇಲೆ ತೆಗೆದು 'ಸಂಭವಿಸುವಿಕೆ'ಗೆ ಹೊಸಗತಿಯನ್ನು ತಂದುಕೊಡುತ್ತಾನೆ. ಆತನ ಕೃತಿಗಳು ಸಂಭವಿಸಿ ಮುಗಿದು ಹೋಗುವ ಬದಲು ಕ್ಯಾನ್‌ವಾಸ್‌ಗಳು ಆ ನಿರ್ದಿಷ್ಟ ಸಂಭವದ ದಾಖಲೆಗಳಾಗಿ ಉಳಿದುಬಿಡುತ್ತವೆ. ಆತನ 'Leap in to the Void 1962' ಎಂಬ ಕೃತಿಯ ವಸ್ತು ಕಲಾವಿದ ಒಂದು ನಿಗದಿಪಡಿಸಿದ ಸಮಯದಲ್ಲಿ ಬಹಿರಂಗವಾಗಿ ಮಹಡಿಯ ಮೇಲಿನಿಂದ ಕೆಳಕ್ಕೆ ಹಾರುವುದು, ತನಗೆ ತಾನೇ ಅಪಾಯಕಾರಿಯಾಗುವುದು, ಇದು ಭೂತಾರಾಧನೆಯ ಸಂದರ್ಭದಲ್ಲಿ ಭೂತವೇಷಧಾರಿ ಬೆಂಕಿತುಳಿಯುವುದು(ಕೆಂಡಸೇವೆ), ಮೈಲಾರಲಿಂಗ ಜಾತ್ರೆಯಲ್ಲಿ ಭಕ್ತ ದೇವರ ಹೆಸರಲ್ಲಿ ತನ್ನ ದೇಹಗಳನ್ನು ಚುಚ್ಚಿಕೊಳ್ಳುವುದು ಇತ್ಯಾದಿಗಳನ್ನು ನೆನಪಿಸುತ್ತದೆ.

ಒಂದೆಡೆ ರಾಫೆನ್‌ಬರ್ಗ್ ಇನ್ನೊಂದೆಡೆ ಬಯ್ಸ್ ಆಧುನಿಕೋತ್ತರರಿಗೆ ಗಾಢವಾದ ಪ್ರಭಾವ ಬೀರಿದವರು. ಬಯ್ಸ್ ಎಂದೂ ಕಲಾಕೃತಿಯೊಂದನ್ನು ಮಾರಾಟದ ವಸ್ತುವನ್ನಾಗಿ ಸೃಷ್ಟಿಸಲಿಲ್ಲ. ಆತನಿಗೆ ಜೀವನವೇ ಒಂದು ಕಲೆ. ಜೀವನದಲ್ಲಿ ನಡೆಯುವ ಘಟನೆಗಳೇ ವಸ್ತುಗಳು. ಆತನ ಕೃತಿಗಳು ಯುದ್ಧದ ಭೀಕರತೆಯನ್ನು, ಯುದ್ಧೋತ್ತರದಲ್ಲಿ ವಿಭಜನೆಗೊಳಗಾದ ಜರ್ಮನಿಯ ಅನರ್ಥ ಸನ್ನಿವೇಶಗಳನ್ನು ಸಾರುತ್ತವೆ. ಅಮಾನವೀಯ ಗೊಂದಲಗಳನ್ನು ಒಂದೆಡೆ ಚಿತ್ರಿಸಿದರೆ ಹತ್ತು ಸಾವಿರ ಪೈನ್ ಮರಗಳನ್ನು ನೆಡುವುದರ ಮೂಲಕ ಆಶಾವಾದವನ್ನೂ ಪ್ರದರ್ಶಿಸುತ್ತಾನೆ.

ನಮ್ಮ ಸಮಕಾಲೀನ ಸಮಾಜವು `Information saturated society ಆದುದರಿಂದ ಯಾವುದೇ ಶೈಲಿ, ಭಾಷೆಯು ಇನ್ನೊಂದರ ಜತೆ ಒಡಂಬಡಿಕೆಯಾಗುವುದಿಲ್ಲ. ಇಲ್ಲಿ ಶೈಲಿ ಅನ್ನುವುದೇ ಇಲ್ಲ. ಕಲಾವಿದ ತನ್ನ ತೋರಿಕೆಯ ಅಸ್ತಿತ್ವ ಪ್ರದರ್ಶನಕ್ಕಾಗಿ ಶೈಲಿಯನ್ನು ಹುಡುಕುವ, ಅದರ ಬೆನ್ನು ಬೀಳುವ ಅಗತ್ಯವೇ ಇಲ್ಲ. ಇದು ಕೆಲವರಿಗೆ ಆಧುನಿಕತೆಯ 'ಅಂತ್ಯ'ವನ್ನು ಸೂಚಿಸುವುದರಿಂದ ಆಧುನಿಕೋತ್ತರ ಇಲ್ಲಿ ಮೈದಾಳುತ್ತದೆ. ಇಲ್ಲಿಂದ ಮೊದಲ್ಗೊಂಡು 'ಶೋಧನೆ'ಯ ಮನಸ್ಸು ಕುಂದಿ 'ಎರವಲು ಪಡಕೊಳ್ಳುವಿಕೆ'ಯಿಂದ ಸಂತುಷ್ಟರಾಗಬೇಕಾಗಿದೆ.

ಆಧುನಿಕೋತ್ತರ ಕಾಲ ಎರವಲು ಪಡೆಯುವ ಕಾಲ-ಅದು ರೂಪವಿರಬಹುದು, ವಸ್ತುವಿರಬಹುದು, ಅವಕಾಶವಿರಬಹುದು -ಇತಿಹಾಸದಿಂದ ಎರವಲು ಪಡೆದುಕೊಳ್ಳುವಿಕೆ, ಮಿಥ್ ಅಥವ ಪುರಾಣಗಳಿಂದ ಎರವಲು ಪಡೆಯುವುದು - ಆ ಮೂಲಕ ಬೆಕ್‌ಮನ್ ತರಹ ಮಿಥ್‌ಗೆ ತನ್ನದೇ ವ್ಯಾಖ್ಯಾನ ಕೊಡುವುದು (ಭೂಪೇನ್ ಖಾಕ್ಕರ್, ಕೆ. ಜಿ. ಸುಬ್ರಹ್ಮಣ್ಯಂ ಅವರ ಕೃತಿಗಳನ್ನೂ ಇಲ್ಲಿ ಉದಾಹರಿಸಬಹುದು), ತಾನು ಜೀವಿಸುವ ಪರಿಸರದಿಂದ ಎರವಲು ಪಡೆದುಕೊಂಡ ವಸ್ತುಗಳನ್ನು ನಿರ್ದಿಷ್ಟ ರೀತಿಯಲ್ಲಿ ಬಳಸುವುದು. ಉದಾಹರಣೆಗೆ ಕಲ್ಲು, ಮಣ್ಣು, ಹುಲ್ಲು, ಕಡ್ಡಿ, ಸೆಗಣಿ, ನೀರು, ಬೆಂಕಿ, ಷೆಲ್ಲಾಕ್, ಎಂಜಿನ್ ಆಯಿಲ್ ಇತ್ಯಾದಿಗಳನ್ನು ಬಣ್ಣ ಮುಂತಾದವುಗಳ ಜಾಗದಲ್ಲಿ ಮಾಧ್ಯಮಗಳನ್ನಾಗಿ ಉಪಯೋಗಿಸುವುದು. ಡೇವಿಡ್ ಹ್ಯಾಮ್ಮನ್ಸ್ ಎಂಬ ಕಲಾವಿದ ತನ್ನ 'Flying carpet, 1990' ಎಂಬ ಕೃತಿಯಲ್ಲಿ ಪರ್ಶಿಯನ್ ರಗ್ ಮೇಲೆ ಹುರಿದ ಕೋಳಿಯ ತುಂಡುಗಳನ್ನು ಕಟ್ಟುವುದರ ಮೂಲಕ ನವೀನ ರೀತಿಯಲ್ಲಿ ದೃಶ್ಯ- ಸಂಭಾಷಣೆಗಿಳಿಯುತ್ತಾನೆ. ಆಶ್ಲೆ ಬಿಕರ್ಟನ್‌ನು ತನ್ನ 'Catalogue: Terra Firma Nineteen Hundred Eighty Ninne #3, 1990 ಎಂಬ ಸ್ಥಾಪನಾ ಕಲೆಯಲ್ಲಿ ಕರಿಮೆಣಸು, ಮೈಲುತುತ್ತು, ಕೆಂಪುಕಲ್ಲು, ಸಿಗರೇಟು, ಹುಲ್ಲುಕಡ್ಡಿ, ಕೂದಲು, ಇತ್ಯಾದಿಗಳ ಮೂಲಕ ತನ್ನ ಆಕಾಂಕ್ಷೆಗಳನ್ನು ನಮ್ಮ ಮುಂದಿಡುತ್ತಾನೆ. ಈ ರೀತಿಯಲ್ಲಿ ವಸ್ತುಗಳನ್ನು ಉಪಯೋಗಿಸುವ ಕ್ರಮವನ್ನು 'ವಿನಿಯೋಗಿಸುವಿಕೆ' (Appropriation) ಎಂದು ಕರೆಯಲಾಗಿದೆ.

ಕ್ಯೂಬಿಸಂನಂತೆ ಈ ಶತಮಾನದ ಇನ್ನೊಂದು ಪ್ರಸಿದ್ಧ ಶೈಲಿ ಅಭಿವ್ಯಕ್ತಿವಾದ (Expressionism). ಕ್ಯೂಬಿಸಂ ಶಾಸ್ತ್ರೀಯ ಶೈಲಿಯಾಗಿದ್ದು, ವೈಜ್ಞಾನಿಕ ದೃಷ್ಟಿಕೋನವನ್ನು ಇಟ್ಟುಕೊಂಡಿದ್ದರೆ ಅಭಿವ್ಯಕ್ತಿವಾದವು ರೊಮ್ಯಾಂಟಿಕ್ ಅಂತರಾಳದ ಮಾತನ್ನು ಹೇಳುತ್ತದೆ. ಕ್ಯೂಬಿಸಂ ಬುದ್ಧಿಯ ವಿಶ್ಲೇಷಣೆಯಾಗಿದ್ದರೆ Expressionism 'ಹೃದಯದ ಅಭಿವ್ಯಕ್ತಿ. ಜರ್ಮನ್ ದೇಶದ ಕಲಾವಿದರಾದ ಕಿರ್ಷ್ನರ್, ಎಮಿಲ್ ನೋಲ್ಡ್, ಬೆಕ್‌ಮನ್ ಮೊದಲಾದವರಿಂದ ಈ ಶತಮಾನದ ಪೂರ್ವಾರ್ಧದಲ್ಲಿ ಪ್ರಸಿದ್ಧಿ ಪಡೆದ ಶೈಲಿಯಿದು. ಎರಡು ಮಹಾಯುದ್ಧಗಳ ನಡುವೆ ಬದುಕಿ ಕೃತಿ ರಚನೆಯಲ್ಲಿ ತೊಡಗಿಸಿಕೊಂಡಿದ್ದ ಈ ಕಲಾವಿದರು ನಾಝಿ (Nazi) ಆಡಳಿತದಲ್ಲಿ ದೇಶದ್ರೋಹಿಗಳ ಪಟ್ಟಿಯಲ್ಲಿ ಸೇರಿಕೊಂಡು ಗಡೀಪಾರು ಮಾಡಲ್ಪಟ್ಟವರು. ಯುದ್ಧದ ಭಯಾನಕತೆ, ಅಮಾನವೀಯ ಪದ್ಧತಿ, ಸಾವು-ನೋವು ಇವು ಬೆಕ್‌ಮನ್, ಖ್ಯಾಟೆ ಕೋಲ್‌ವಿಜ್, ಬಾರ್ಲಾಕ್ ಅವರ ಕೃತಿಗಳ ಸರ್ವೇಸಾಮಾನ್ಯ ವಿಷಯ, ಅಂತೆಯೇ ಬಯ್ಸ್ ಕೃತಿಗಳಲ್ಲಿ ಕೂಡ.

ಯುದ್ಧಾನಂತರದ ಜರ್ಮನಿಯ ಪ್ರಮುಖ ಕಲಾವಿದರಲ್ಲಿ ಒಬ್ಬ ಜಾರ್ಜ್ ಬಸೆಲಿಟ್ಸ್, ಇನ್ನೊಬ್ಬ ಆನ್‌ಸೆಲ್ಮ್ ಕೀಫರ್. ಬಸೆಲಿಟ್ಸ್ ಕೃತಿಗಳನ್ನು Neo-Expressionism ಎನ್ನುತ್ತಾರೆ. ಈತ ಅನರ್ಥದ ಚಿತ್ರಣವನ್ನು, ಕ್ಯಾನ್‌ವಾಸ್‌ಗಳನ್ನು ತಲೆಕೆಳಗಾಗಿ ಇಡುವ(Deconstruction) ಮೂಲಕ ತೋರಿಸುತ್ತಾನೆ. ಅಸಹ್ಯ ರೂಪಗಳು, ನಿರ್ದಯ ಬಣ್ಣಗಾರಿಕೆಯಿಂದ ಸತ್ಯ-ಅಸತ್ಯಗಳನ್ನು ಬಿಚ್ಚಿಕೊಳ್ಳುತ್ತಾನೆ. ಬಣ್ಣಗಾರಿಕೆಯಲ್ಲಿ (ಕೇವಲ ತೈಲವರ್ಣಗಳ ಉಪಯೋಗ) ಶುದ್ಧತೆಯನ್ನು ಕಾಪಾಡಿಕೊಳ್ಳುತ್ತಾನೆ. ಉದಾಹರಣೆಗೆ 'Women on the Beach', 'The Boat' 1984, ಮುಂತಾದ ಕೃತಿಗಳು.

ಕೀಫರ್ ಬಯ್ಸ್‌ನ ವಿದ್ಯಾರ್ಥಿ. 'Women of the Revolution' (1986), 'Seraphim' (1984) ಮುಂತಾದವು ಈತನ ಕೃತಿಗಳು. ಇವು ಆಧುನಿಕೋತ್ತರ ಕೃತಿಗಳಿಗೆ ಸರಿಯಾದ ಉದಾಹರಣೆ. ಇವುಗಳಲ್ಲಿ ಅನುಭವಗಳ ಗಾಢತೆ ಇದೆ, ನಿಗೂಢತೆ ಇದೆ. ಬಣ್ಣ-ವಸ್ತುಗಳನ್ನು ನಿರರ್ಗಳವಾಗಿ ಉಪಯೋಗಿಸಬಲ್ಲ ಈತನ ಭಾಷೆ ಗಂಭೀರವಾಗಿದೆ. ಕೀಫರ್ ನ ವಿಶಾಲವಾದ ಕ್ಯಾನ್‌ವಾಸ್ ಮೇಲೆ ಪೆಯಿಂಟ್‌ನ ಜತೆ ಹುಲ್ಲು-ಕಡ್ಡಿ, ಕಲ್ಲು-ಮಣ್ಣು, ಶೆಲ್ಲಾಕ್, ಬೂದಿ, ಮಸಿ ಇತ್ಯಾದಿ ವಸ್ತುಗಳ ಬಳಕೆಗಳ ಮೂಲಕ ಮಾಧ್ಯಮವನ್ನು ಭಾಷೆಯಾಗಿ ದುಡಿಸಿಕೊಳ್ಳುವ ಪರಿಯಿದೆ. 'ವಸ್ತು'ಗಳನ್ನು ಎರವಲು ಪಡೆವಂತೆ ಈತ ಇತಿಹಾಸ, ಮಹಾಕಾವ್ಯಗಳಿಂದ ಎರವಲು ಪಡೆದುಕೊಳ್ಳುತ್ತಾನೆ. ಪುರಾಣ, ಮಿಥ್‌ಗಳ ಜತೆ ವ್ಯವಹರಿಸುವಾಗ ವಾಸ್ತವವನ್ನು ಗಮನದಲ್ಲಿಟ್ಟುಕೊಂಡು ಚಿತ್ರಭಾಷೆಯನ್ನು ನಿರ್ವಹಣೆ ಮಾಡುವ ಚಾಕಚಕ್ಯತೆ ಈತನಿಗಿದೆ. ಇಪ್ಪತ್ತನೇ ದಶಕಾನಂತರ 'ಪೇಂಟರ್ಲಿ' ಶೈಲಿಯನ್ನು ಅಳವಡಿಸಿಕೊಳ್ಳುವ ಈತನ ಕೃತಿಗಳು ಸಲೀಸಾಗುತ್ತವೆ.

ದಂತಕತೆಗಳನ್ನು ಗೂಢಾರ್ಥಗಳನ್ನು ಬಳಸುವುದರ ಮೂಲಕ ಜರ್ಮನರ ದ್ವಂದ್ವ ಸ್ವಭಾವವನ್ನು ಪ್ರತಿಪಾದಿಸುತ್ತಾನೆ. ಈತನ installationಗಳು ನಾಝಿ ಇತಿಹಾಸದ ದುರಂತವನ್ನು ಸಾರುತ್ತದೆ.

ಎ. ಆರ್. ಫೆಂಕ್ ಇನ್ನೊಬ್ಬ ಜರ್ಮನ್ ಕಲಾವಿದ. ಈತ ಪ್ರಾಚೀನ ಸಂಜ್ಞೆಗಳನ್ನು, ಚಿಹ್ನೆಗಳನ್ನು ತನ್ನ ಕೃತಿಗಳಲ್ಲಿ ಪ್ರತಿಮೆಗಳಾಗಿ ಉಪಯೋಗಿಸುತ್ತಾನೆ. ಜೂಲಿಯನ್ ಶ್ನಾಬೆಲ್ ಎಂಬ ಅಮೆರಿಕನ್ ಕಲಾವಿದನ 'ಸಮುದ್ರ' 1981 ಎಂಬ ಕೃತಿಯು 'ವಿನಿಯೋಗ' ಕಲೆಗೆ ಇನ್ನೊಂದು ಉದಾಹರಣೆ.

## IV

ಆಧುನಿಕ ಭಾರತೀಯ ಕಲೆಯು ಕಾರಣಾಂತರಗಳಿಂದ ಪಾಶ್ಚಿಮಾತ್ಯ ದೇಶಗಳಲ್ಲಿ ನಡೆಯುತ್ತಿರುವ ಕಲಾಚಳವಳಿಗಳನ್ನು ನೆಚ್ಚಿಕೊಳ್ಳಬೇಕಾಗಿದೆ. ಬ್ರಿಟೀಷ್ ಆಡಳಿತಾನಂತರ ಸಾಮಾಜಿಕ, ಸಾಂಸ್ಕೃತಿಕ ಗೊಂದಲಗಳು ನಮ್ಮನ್ನು ಕಾಡುತ್ತಿವೆ. ಕೆಲವು ಶತಮಾನಗಳನ್ನು ಪರರ ಅಧೀನದಲ್ಲಿ ಕಳೆದ ನಮಗೆ ವಿಚಾರ ಸ್ವಾತಂತ್ರ್ಯವಿದೆ ಎನ್ನುವುದೂ ಮರೆತುಬಿಟ್ಟೇವೇನೊ ಎಂದೆನ್ನಿಸುತ್ತದೆ! ಪ್ರತ್ಯಕ್ಷವಾಗಿಯೂ, ಪರೋಕ್ಷವಾಗಿಯೂ ಜೀವನದ ಎಲ್ಲಾ ಸ್ತರಗಳಲ್ಲಿ ನಾವು ಪಾಶ್ಚಾತ್ಯರ ಅವಲಂಬನೆಯನ್ನು ಸಾದರಪಡಿಸುತ್ತಿದ್ದೇವೆ. ನಮ್ಮ ಜೀವನಶೈಲಿ, ರಾಜಕೀಯ ಆರ್ಥಿಕ ಸುಧಾರಣೆಗಳು, ಕೈಗಾರಿಕೆಗಳು, ಸಿನಿಮಾ, ಸಾಹಿತ್ಯ, ಕಲೆ, ವಿಜ್ಞಾನ ಯಾವುದೋ ದ್ವಂದ್ವದಲ್ಲಿ ಸಿಲುಕಿ ನಲಗುತ್ತಿದೆ. ಒಂದು ತ್ರಿಶಂಕು ಸ್ಥಿತಿ ನಿರ್ಮಾಣವಾಗಿದೆ.

ಪಾಶ್ಚಾತ್ಯರಿಗೂ, ಭಾರತೀಯರಾದ ನಮಗೂ ಕೆಲವು ಮೂಲಭೂತ ವ್ಯತ್ಯಾಸಗಳಿವೆ. ಅದು, ಅವರ ಮತ್ತು ನಮ್ಮ ಅಸ್ತಿತ್ವವನ್ನು ಸಾರುತ್ತದೆ. ಭೌತಿಕ ಭಿನ್ನತೆಯಂತೂ ನಿಚ್ಚಳ. ಅದಕ್ಕಿಂತಲೂ ಮುಖ್ಯವಾದುದು ಮಾನಸಿಕ ಭಿನ್ನತೆ. ಪಾಶ್ಚಾತ್ಯರು materialist ಗಳು, ಅಂದರೆ ಭೌತಿಕವಾದಿಗಳು. ಯಾವುದೇ ವಿಷಯವನ್ನು ವಸ್ತುನಿಷ್ಠವಾಗಿ ನೋಡುವ ಅವರು ಅದನ್ನು ವೈಜ್ಞಾನಿಕ ಪರೀಕ್ಷೆಗೆ ಒಳಪಡಿಸುವರು. ಅದರ ಉಪಯೋಗ ಪಡೆದುಕೊಳ್ಳುವರು. ಉದಾಹರಣೆಗೆ ಲಿಯನಾರ್ಡೋ ಡಾ ವಿಂಚಿಯ ನೋಟ್‌ಬುಕ್‌ನಲ್ಲಿ ಕಂಡುಬಂದಂತಹ 'ಹಾರುವ ಯಂತ್ರ'ದ ರೇಖಾಚಿತ್ರ. ಇಲ್ಲಿ ಲಿಯನಾರ್ಡೊ ಒಂದು ಹಕ್ಕಿಯನ್ನು ನೋಡುತ್ತಾನೆ. ಅದರ ಬಾಹ್ಯ ರೂಪವನ್ನು, ಅಂತರ್‌ಸ್ವರೂಪವನ್ನು ಕೂಲಂಕುಶವಾಗಿ ಅಭ್ಯಾಸ ಮಾಡುತ್ತಾನೆ. ಹಕ್ಕಿಯ 'ಟೆಕ್ನಾಲಜಿ'ಯ ಸ್ಪಷ್ಟ ಚಿತ್ರಣವನ್ನು ಕೊಡುತ್ತಾನೆ.

ನಾವು Spritutalistಗಳು. ನಮ್ಮ ಪ್ರಾಚೀನರು ಎಲ್ಲಕ್ಕೂ ಆಧ್ಯಾತ್ಮಿಕ ಅರ್ಥವನ್ನು ಕೊಟ್ಟವರು. ನಮ್ಮ ಮುಂದೆ ಹಕ್ಕಿಯೊಂದು ಹಾರಾಡುವಾಗ ಹಾರಾಟದ ಹಿಂದಿರುವ ಅಮೂರ್ತ ಲೋಕವೊಂದು ನಮ್ಮ ಗಮನ ಸೆಳೆಯುತ್ತದೆ. ನಾವದನ್ನು ಅಂತರ್‌ದೃಷ್ಟಿಯಿಂದ ನೋಡುತ್ತೇವೆ. ಹಕ್ಕಿ ಸಂಕೇತವಾಗುತ್ತದೆ. ಪುಷ್ಪಕವಿಮಾನ ಕೇವಲ ಪುರಾಣಕ್ಕೇ ಸೀಮಿತವಾಗುತ್ತದೆ.

ಭಾರತೀಯ ಕಲೆ ಪರದೇಶಿ ಕಲೆಯ ಪ್ರಭಾವಕ್ಕೆ ಒಳಗಾಗಿರುವುದು ಇದೇನು ಹೊಸತಲ್ಲ. ನಮ್ಮ ಕಲಾಪರಂಪರೆಗೊಂದು ಸ್ವರೂಪ ತಂದುಕೊಟ್ಟಿರುವುದೇ ಹೊರದೇಶಗಳ ಪ್ರಭಾವ. ಮೌರ್ಯರ ಶಿಲ್ಪ ಕಲೆಯಲ್ಲಿ ಗ್ರೀಕ್ ಪ್ರಭಾವ ಎದ್ದು ತೋರಿದರೆ ಅಜಂತಾ ಚಿತ್ರಕಲೆ 'ಅಚ್ಚ ಭಾರತೀಯ'ವೇ ಆಗಿದ್ದರೂ ಈಜಿಪ್ಟ್ ಚಿತ್ರಗಳ ಅವಕಾಶ ಯೋಜನೆ, ನಿರೂಪಣಾ ಕ್ರಮ, ಗ್ರೀಕ್ ಕುಂಭಕಲೆಯ ಶುದ್ಧ, ಲಯಬದ್ಧ ರೇಖೆಗಳ ಉಪಯೋಗವನ್ನು ಸ್ಫುಟವಾಗಿ ಕಾಣಬಹುದು. ಮೊಗಲರ ಚಿತ್ರಕಲೆ-ಭಾರತೀಯ, ಪರ್ಶಿಯನ್ ಹಾಗೂ ಯುರೋಪಿಯನ್ ಕಲೆಗಳ ಸಂಗಮ ಎಂದು ಬೇರೆ ಹೇಳಬೇಕಾಗಿಲ್ಲ.

ನಮ್ಮ ಸಾಂಪ್ರದಾಯಿಕ ಕಲೆ ಎಂದೂ ಒಬ್ಬ ವ್ಯಕ್ತಿಯ ವೈಯಕ್ತಿಕ ಕೃತಿಯಾಗಲಿಲ್ಲ. ಅದೊಂದು ಕೌಟುಂಬಿಕ ಉದ್ಯೋಗ. ಸಂಪ್ರದಾಯದಲ್ಲಿ ಗೊತ್ತಾದ ಪಂಗಡವನ್ನುಳಿದು ಎಲ್ಲ ಜಾತಿಯವರು ಇಲ್ಲಿ ಕಲಾವಿದರಾಗುವುದು ಸಾಧ್ಯವಿಲ್ಲ. ನಮ್ಮ ಕಲೆ ಒಬ್ಬ ವ್ಯಕ್ತಿಯ ಮಾನವೀಯ ಗುಣಗಳ ಅಭಿವ್ಯಕ್ತಿಯಾಗಿ ರೂಪಿಸಲ್ಪಟ್ಟಿಲ್ಲ.

ನಮ್ಮ ಆಧುನಿಕ ಕಲೆ ಇದಕ್ಕೆ ತದ್ವಿರುದ್ಧ. ಹತ್ತೊಂಬತ್ತನೇ ಶತಮಾನದ ಉತ್ತರಾರ್ಧದಲ್ಲಿ ಮದರಾಸು, ಮುಂಬೈ, ಕಲ್ಕತ್ತಾ ಹಾಗು ಲಾಹೋರ್‌ಗಳಲ್ಲಿ ಕಲಾಶಾಲೆಗಳನ್ನು ತೆರೆದ ಬ್ರಿಟೀಷರು 'ಅಕಾಡೆಮಿಕ್'ಪದ್ಧತಿಯೊಂದನ್ನು ನಮ್ಮಲ್ಲಿ ಬಿತ್ತಿದರು. ಸಾಂಪ್ರದಾಯಿಕ ಕಲಾವಿದರನ್ನು ಬದಿಗೊತ್ತಿ ಹೊಸ ಪಂಗಡವೊಂದು ಹುಟ್ಟಿಕೊಂಡಿತು. ಈ ಮಧ್ಯೆ ರವಿವರ್ಮನಂತಹ ಕಲಾವಿದ ಸ್ವಪ್ರಯತ್ನದಿಂದ ವೇದಿಕೆಗೆ ಬರುತ್ತಾನೆ. ನಮ್ಮ ಇತಿಹಾಸ, ಪುರಾಣ ವಿಷಯಗಳನ್ನೆತ್ತಿಕೊಂಡು ಯುರೋಪಿಯನ್ ರೆನಾಯಸೆನ್ಸ್ ಶೈಲಿಯನ್ನು ಅನುಸರಿಸಿ ಕೃತಿರಚನೆಗಿಳಿಯುತ್ತಾನೆ. ಆಧುನಿಕ ಕಲೆಯ ವಕ್ತಾರನಾಗುತ್ತಾನೆ.

ಅಂದಿನ ರಾಜಕೀಯ ಪರಿಸ್ಥಿತಿಗೆ ಸ್ಪಂದಿಸಿದವರು ಬೆಂಗಾಲ್ ಸ್ಕೂಲ್ ಕಲಾವಿದರು. ಭಾರತೀಯ ಪರಂಪರೆಯನ್ನು ಉಳಿಸಲು ಪಣತೊಟ್ಟ ಇವರು ಕ್ಯಾನ್‌ವಾಸ್, ತೈಲವರ್ಣ, ಪಾಶ್ಚಾತ್ಯಚಿತ್ರರಚನಾ ತಂತ್ರ ಇತ್ಯಾದಿಗಳನ್ನು ತಿರಸ್ಕರಿಸುತ್ತಾರೆ. ಒಂದೆಡೆ ರಬೀಂದ್ರನಾಥರ ಸಾರ್ವತ್ರಿಕತೆ, ಇನ್ನೊಂದೆಡೆಗೆ ಜಾಮಿನಿರಾಯ್‌ವರ ಜನಪದ ನಿಲುವು, ನಂದಲಾಲ್ ಬೋಸ್ ಹಾಗು ಶಾಂತಿನಿಕೇತನ; ಅಮೃತಾ ಶೇರ್‌ಗಿಲ್‌ಳ ಭಾರತ ಪ್ರವೇಶ-ಪಾಶ್ಚಾತ್ಯ ಹಾಗು ಭಾರತೀಯ ಶೈಲಿಗಳ ಏಕೀಕರಣ. ಬೇಂದ್ರೆ, ಹೆಬ್ಬಾರ್, ಹುಸೈನರ ಮೇಲೆ

ಶೇರ್‌ಗಿಲ್ ಪರಿಣಾಮ - ಹೊಸ ಹುಮ್ಮಸ್ಸು. ಬಿನೋದ್ ಬಿಹಾರಿ, ರಾಮ್‌ಕಿಂಕರ್ ಅವರ ಪ್ರೌಢ ಕೃತಿಗಳು. ಪಿಕಾಸೋನನ್ನು ನೆಚ್ಚಿಕೊಂಡ ಸೂಜ್ಞ ಇನ್ನೊಂದೆಡೆ ಆರಾ, ರಾಜ್ಞಾ, ಕುಲಕರ್ಣಿ ಮತ್ತೊಂದೆಡೆ ರಾಯ್ ಚೌಧುರಿಯಂತಹ ಅಕಾಡೆಮಿಸ್ಟ್‌ಗಳು, ಕಲ್ಕತ್ತಾ ಕಲಾವಿದರು. ಇದು ಸ್ವಾತಂತ್ರ್ಯಪೂರ್ವದ ಭಾರತೀಯ ಕಲೆಯ ಸಂಕ್ಷಿಪ್ತ ರೂಪ.

ಭಾರತೀಯ ಆಧುನಿಕ ಕಲೆಯಲ್ಲಿ ಕಂಡುಬರುವ ಒಂದು ಕೊರತೆ ಎಂದರೆ ನಿಖರವಾದ ಉದ್ದೇಶವಿಲ್ಲದೇ ಇರುವುದು, ಉದ್ದೇಶ ಸಾಧನೆಗಾಗಿ ಕಲಾಕ್ರಿಯೆಯನ್ನು ದುಡಿಸಿಕೊಳ್ಳಲು ಸಾಧ್ಯವಾಗದೇ ಇರುವುದು. ಒಂದು ಶೈಲಿ, ಇನ್ನೊಂದು ಶೈಲಿಯ ಮಧ್ಯೆ, ಒಬ್ಬ ಕಲಾವಿದ ಇನ್ನೊಬ್ಬ ಕಲಾವಿದನ ಮಧ್ಯೆ ಕೊಂಡಿಯೊಂದು ಉದ್ಭವಿಸದೇ ಇರುವುದು.

ಪಾಶ್ಚಾತ್ಯ ಕಲೆಯ ಎಲ್ಲಾ ಪ್ರಕಾರಗಳು ಇಂದು ನಮ್ಮ ಸಮಕಾಲೀನ ಕಲೆಯಲ್ಲಿ ಪ್ರಚಲಿತವಿದೆ. ಸ್ವಾತಂತ್ರ್ಯೋತ್ತರ ಕಲೆ ವೈವಿಧ್ಯತೆಯ ಹಲವು ಮಜಲುಗಳನ್ನು ಕಂಡುಕೊಂಡಿವೆ. ತನ್ಮಧ್ಯೆ ಯುರೋಪು, ಅಮೇರಿಕಾ ಮುಂತಾದ ದೇಶಗಳ ನಡುವೆ ಇದ್ದಂತಹ ಕಂದಕವೊಂದು ಕ್ರಮೇಣ ಮುಚ್ಚಿಕೊಳ್ಳುತ್ತಿದೆ. ಬರೋಡ, ಶಾಂತಿನಿಕೇತನಗಳಲ್ಲಿ ಕೇಂದ್ರಿಕರಿಸಲ್ಪಟ್ಟು ಕಲೆಯ ಹೊಸ ಶೈಲಿಗಳು ಪ್ರಚಾರಪಡೆಯುತ್ತವೆ. ಉನ್ನತ ಶಿಕ್ಷಣಕ್ಕೋಸ್ಕರ ಕಲಾವಿದ್ಯಾರ್ಥಿಗಳು ಇತರ ರಾಜ್ಯಗಳಿಂದಲೂ, ಹೊರದೇಶಗಳಿಂದಲೂ - ಅಲ್ಲಿಂದ ಇಲ್ಲಿಗೂ ಹಾಗೆ ಕೊಡುಕೊಳ್ಳುವಿಕೆ ಮೂಲಕ ಸಾಮರಸ್ಯವೊಂದು ಅಂಕುರಿಸುತ್ತದೆ.

ಇಂಗ್ಲೇಂಡಿನಲ್ಲಿ ಆರ್.ಬಿ. ಕಿತ್ಯಾ, ಮೊದಲಾದ ಕಲಾವಿದರ ಒಡಂಬಡಿಕೆಯೊಂದಿಗೆ 'ನೆರೆಟಿವ್ ಸ್ಕೂಲ್' (ಕಥನ ರೂಪದಲ್ಲಿ ಅವಕಾಶ ನಿಯೋಜಿಸುವಕ್ರಮ. ಉದಾಹರಣೆಗೆ ಅಜಂತಾ ಚಿತ್ರಗಳು) ಹುಟ್ಟಿಕೊಳ್ಳುತ್ತದೆ. ಇದು ಭಾರತದಲ್ಲಿ 'ಬರೋಡ ಸ್ಕೂಲ್' ಎಂದು ಪ್ರಚಾರ ಪಡೆಯುತ್ತದೆ. ಕೆ.ಜಿ. ಸುಬ್ರಹ್ಮಣ್ಯಂ, ಗುಲಾಂ ಶೇಖ್, ಬುಪೇನ್ ಖಾಕ್ಕರ್ ಮೊದಲಾದವರು ಈ ಶೈಲಿಯ ಪ್ರವರ್ತಕರು. ಅರ್ಪಿತಾ ಸಿಂಗ್, ನಳಿನಿ ಮಲಾನಿ, ವಿವಾನ್ ಸುಂದರಂ ಮೂಲಕ ದೇಶದ ಇತರ ಪ್ರದೇಶಗಳಿಗೆ ಶೈಲಿಯ ಪ್ರಸಾರವಾಗುತ್ತವೆ. ಬರೋಡ, ಶಾಂತಿನಿಕೇತನಗಳಲ್ಲಿ ಶಿಕ್ಷಣ ಪಡೆದ ಕರ್ನಾಟಕದ ಯುವ ತಲೆಮಾರಿನ ಕಲಾವಿದರಾದ ಸಿ. ಚಂದ್ರಶೇಖರ್, ರಾಮದಾಸ್, ಅಡ್ಯಂತ್ತಾಯ, ವಿಜಯ ಬಾಗೋಡಿ, ಶ್ಯಾಂಸುಂದರ್, ದೇಶ್‌ಪಾಂಡೆ, ಚಂದ್ರನಾಥ್, ಶೀಲಾಗೌಡ, ಪುಷ್ಪಮಾಲ, ಬಿ.ವಿ. ಸುರೇಶ್, ರವಿಕಾಶಿ, ಚಂದ್ರಹಾಸ್, ಪ್ರಕಾಶ್ ಬಾಬು ಒಂದೆಡೆಯಾದರೆ ಸಮಕಾಲೀನರಾದ ಪ್ರಭಾಕರನ್, ಕೃಷ್ಣಕುಮಾರ್, ಮೋಹನ್‌ದಾಸ್, ಅಲೆಕ್ಸ್ ಮ್ಯಾಥ್ಯೋ, ರಿಮ್‌ಜ್ಜನ್ ಮೊದಲಾದ ಎಡಪಂಥೀಯ ಮಲಯಾಳಿ ಕಲಾವಿದರು 'ನೆರಟಿವ್ ಟ್ರೆಂಡ್'ನ

ಮೂಲಕ ಮುಂದುವರಿಯುತ್ತಾ, ಎಕ್ಸ್‌ಪ್ರೆಸ್ಸನಿಸ್ಟ್‌ಗಳಾಗಿ ಫಿಗರೇಟಿವ್ ಕಲೆಗೆ ಪ್ರಭಾವಿ ಶೈಲಿಯೊಂದನ್ನು ಕಂಡುಕೊಳ್ಳುತ್ತಾರೆ.

ರೇಖಾ ರೋಡ್‌ವಿಟ್ಟಿಯಾ, ವಾಸುದೇವನ್, ಸುರೇಶ್, ಶೀಲಾಗೌಡ, ರಿಮ್‌ಜ್ಞನ್, ಜಯಕುಮಾರ್, ಇಂದ್ರಪರೋಮಿತ್ ಮೊದಲಾದವರು ಇಂಗ್ಲೆಂಡಿನ ರಾಯಲ್ ಕಾಲೇಜ್ ವಾತಾವರಣದಲ್ಲಿ ಬೆಳೆಯುತ್ತಾರೆ. 'ನೆರೆಟಿವ್ ಟ್ರೆಂಡ್' ಮಗ್ಗುಲು ಬದಲಾಯಿಸುತ್ತದೆ. ಹೊಸ ದೃಷ್ಟಿಕೋನಗಳಿಗೆ ಚಾಲನೆ ಕೊಡುತ್ತದೆ.

ಪ್ರದರ್ಶನ ಕಲೆ(Performance), ಪರಿಸರಗಳು(Environments), ಸಂಭವಿಸುವಿಕೆಗಳು (Happenings) ಬಾಡಿ ಆರ್ಟ್ (Body art) ಇತ್ಯಾದಿ ಕಲಾಪ್ರಕಾರಗಳು ಇನ್ನೂ ನಮ್ಮಲ್ಲಿ ಅಭಿವ್ಯಕ್ತಿ ಮಾಧ್ಯಮಗಳಾಗಿ ಕಾಲಿರಿಸಿಲ್ಲ - ಆದರೆ ಧಾರ್ಮಿಕ ಕ್ರಿಯೆಯಾಗಿ ಇಂದಿಗೂ ಜನಪದರು ಮೇಲೆ ಹೇಳಿರುವ ಎಲ್ಲಾ ಪ್ರಕಾರಗಳನ್ನು ನಮ್ಮ ಹಳ್ಳಿಗಳಲ್ಲಿ ಪೋಷಿಸುತ್ತಾ ಬಂದಿದ್ದಾರೆ - ಇತ್ತೀಚೆಗೆ Profitabilityಯು ನಮ್ಮ ಗುರಿಗಳಲ್ಲಿ ಪ್ರಾಮುಖ್ಯತೆ ಪಡೆಯುವುದರಿಂದಲೂ, ವ್ಯಾಪಾರೀ ಮನೋಭಾವ ಬೆಳೆದಿರುವುದರಿಂದಲೂ ಮೇಲೆ ಹೇಳಿದ ಕಲಾಪ್ರಕಾರಗಳು ಕ್ಷಣಿಕವಾಗುವದರಿಂದಲೂ, ಈ ಮಾಧ್ಯಮಗಳು ನಮ್ಮ ನಡುವೆ ಜನಪ್ರಿಯತೆಗಳಿಸಿಕೊಂಡಿಲ್ಲ.

ಎರವಲು ಪಡೆಯುವುದು ನಮಗೆ ಕಷ್ಟವಾಗುವುದಿಲ್ಲ. ಆದರೆ ಯಾವುದನ್ನು ಹೇಗೆ ಎರವಲು ಪಡೆಯಬೇಕೆಂಬ ಪ್ರಶ್ನೆ ನಮ್ಮಲ್ಲಿ ಉದ್ಭವಿಸುತ್ತದೆ. ಇದು ಗೊಂದಲಗಳಿಗೆ ಕಾರಣವಾಗುತ್ತದೆ.

'ಪೋಸ್ಟ್ ಮಾಡರ್ನಿಸಂ'ನ್ನು ಇಂಡಿಯಾದಲ್ಲಿ ಸದ್ಯದ ಸ್ಥಿತಿಯಲ್ಲಿ ಒಂದು ತತ್ವವಾಗಿ, ತಾತ್ವಿಕ ನೆಲೆಯಲ್ಲಿ ನಿಂತು ವಿಶ್ಲೇಷಿಸುವುದು ಕಷ್ಟವಾಗಬಹುದು. ಇದು ಇತ್ತೀಚೆಗಷ್ಟೇ ಜನಪ್ರಿಯವಾಗುತ್ತಿರುವ ಹೊಸ ಶೈಲಿಯಾಗಿದೆ. ಇನ್ನೂ ಈ ಬಗ್ಗೆ ನಮ್ಮಲ್ಲಿ ಗೊಂದಲಗಳಿವೆ. ಪೋಸ್ಟ್ ಮಾಡರ್ನಿಸಂ ವೈಚಾರಿಕ ನೆಲೆಯಲ್ಲಿ ನಮ್ಮ ಕಲಾವಿದರ ನಡುವೆ ಬೇರುಬಿಟ್ಟಿಲ್ಲ. ನಮ್ಮ ಪರಿಸ್ಥಿತಿಗೆ ಅನುಗುಣವಾಗಿ ಅದನ್ನು ಇಲ್ಲಿಯವರೆಗೆ ನಾವು ಬಳಸಿಕೊಂಡಿಲ್ಲ. ಪಾಶ್ಚಾತ್ಯರನ್ನು ಅನುಸರಿಸುವಾಗ ಅವರ ತತ್ವಗಳನ್ನು ಮೇಲ್ಮೈಯಲ್ಲಿ ನೋಡುತ್ತೇವೆಯೇ ವಿನಾ ಆಳಕ್ಕಿಳಿದು ಅರ್ಥೈಸಿಕೊಳ್ಳುವಂತಹ, ನಮ್ಮ ಸಂದರ್ಭಕ್ಕೆ ತಕ್ಕುದಾಗಿ ಉಪಯೋಗಿಸುವಂತಹ ಸಹನೆ ನಮ್ಮಲ್ಲಿ ಇದ್ದಂತಿಲ್ಲ. ಯಾವುದೋ ಒಂದು ಭಯ ನಮ್ಮನ್ನು ಕಾಡುತ್ತಿರುತ್ತದೆ. 'ಡಿಸ್ಕವರಿ' ಎನ್ನುವ ಶಬ್ದ ಕ್ಲಿಷ್ಟವೆನಿಸುತ್ತದೆ.

ಇಂಡಿಯಾದಲ್ಲಿ 'ಬಳಸುವಿಕೆ' (Appropriation) ಯನ್ನು ಮೊದಲು ಚಾಲನೆಗೆ ತಂದವರಲ್ಲಿ (ಎಂಬತ್ತನೆ ದಶಕದ ಪೂರ್ವಾರ್ಧದಲ್ಲಿ) ಒಬ್ಬರು ವಿವಾನ್ ಸುಂದರಂ.

ಅವರು ತೈಲಚಿತ್ರಗಳನ್ನು ಮಾಡುತ್ತಿರುವ ಜತೆ-ಜತೆಗೇನೆ ಸಮಾನಾಂತರವಾಗಿ ವಿವಿಧ ವಸ್ತುಗಳ ಬಳಕೆಯನ್ನು ತಮ್ಮ ಕೃತಿಗಳಲ್ಲಿ ಪ್ರಯೋಗಾತ್ಮಕವಾಗಿ ಉಪಯೋಗಿಸಿ ಕಲಾಕೃತಿಯೊಂದನ್ನು ಬೇರೆ ಬೇರೆ ಸ್ತರಗಳಲ್ಲಿ ಕಲ್ಪಿಸಿಕೊಳ್ಳಲು ಎಡೆಮಾಡಿಕೊಡುತ್ತಾರೆ-ಗಾಜಿನ ಪೆಟ್ಟಿಗೆಯಲ್ಲಿ ಮಸಿ ಇತ್ಯಾದಿಗಳನ್ನು ಬಳಸುತ್ತಾರೆ. ಮುಂದೆ ವಿವಿಧ ಮಾಧ್ಯಮಗಳನ್ನು ಬಳಸುತ್ತ ಕೃತಿರಚನೆಗೆ ತಮ್ಮನ್ನು ತೊಡಗಿಸಿಕೊಂಡ ಇವರು ಎಂಜಿನ್ ಆಯಿಲ್ ಇತ್ಯಾದಿಗಳಿಂದ ಚಿತ್ರರಚನೆ ಮಾಡುತ್ತಾರೆ. ಮದರಾಸಿನಲ್ಲಿ ಆಲ್‌ಫೋನ್ಸೋ ಅವರೂ ಈ ರೀತಿಯ ಪ್ರಯೋಗಗಳನ್ನು ಮಾಡಿರುತ್ತಾರೆ. ಅಚ್ಚು ಕಲೆಯಲ್ಲಿ ಈ ರೀತಿಯ 'ಬಳಸುವಿಕೆ'ಯನ್ನು ಬಹಳ ಸುಂದರವಾಗಿ ನಿಯೋಗಿಸಿದವರು ಪಳನಿಯಪ್ಪನ್. 80ನೇ ದಶಕದ ಇವರ ಎಚ್ಚಿಂಗ್ ಪ್ರಿಂಟ್‌ಗಳ ಮೇಲೆ ವಿವಿಧ ಪದಾರ್ಥಗಳನ್ನು ದಾರಗಳಿಂದ ಕಟ್ಟುವ ಮೂಲಕ, ಮೊಹರುಗಳನ್ನು ಬಿತ್ತುವ ಮೂಲಕ, ನಿರ್ದಿಷ್ಟ ಕೃತಿಯ ಹಲವು ಪ್ರಿಂಟ್‌ಗಳಿಗೆ 'ಹಲವು ಸ್ವಂತಿಕೆ'ಗಳನ್ನು ಕೊಡುವುದರ ಮೂಲಕ, ಅಲ್ಲದೆ ಇತ್ತೀಚೆಗೆ ಚರ್ಮದ ಹಾಳೆಯ ಮೇಲೆ ಮಾಡುತ್ತಿರುವ ಕೃತಿಗಳು ಈ ನಿಟ್ಟಿನಲ್ಲಿ ವಿಶಿಷ್ಟತೆಯನ್ನು ಪಡೆಯುತ್ತವೆ.

ಇತ್ತೀಚೆಗೆ 'ಪೋಸ್ಟ್ ಮಾಡರ್ನ್ ಟೆಂಡೆನ್ಸಿ'ಯನ್ನು ಯಶಸ್ವಿಯಾಗಿ ಪ್ರತಿಪಾದಿಸಿದ್ದು ಕರ್ನಾಟಕದ ಕಲಾವಿದ/ಕಲಾವಿದೆಯರು. ಇದರ ಕೀರ್ತಿ ಶೀಲಾಗೌಡ ಅವರಿಗೆ ಸಲ್ಲುತ್ತದೆ. ಇಂಗ್ಲೆಂಡಿನಲ್ಲಿ ಉನ್ನತ ಶಿಕ್ಷಣ ಪಡೆದಿರುವ ಇವರು 'ಬಳಸುವಿಕೆ'ಯನ್ನು ತಮ್ಮ ಕೃತಿಗಳಲ್ಲಿ ಅತ್ಯಂತ ಪ್ರಬಲವಾಗಿ ನಿರ್ವಹಿಸಬಲ್ಲರು. ವಿಭಿನ್ನ ಮಾಧ್ಯಮಗಳ ಉಪಯೋಗದಲ್ಲಿ (ಸೆಗಣಿ ಮುಂತಾದ 'ವಸ್ತು'ಗಳನ್ನು ಮಾಧ್ಯಮಗಳಾಗಿ ಪಡೆದುಕೊಳ್ಳುವುದನ್ನು ಇಲ್ಲಿ ಉದಾಹರಿಸಬಹುದು) ಅನುಭವಗಳ ಗಾಢತೆ ಎದ್ದು ತೋರುವುದು. ಇವರ ಕೃತಿಗಳು ಚೈತನ್ಯ ಶೀಲತೆಯನ್ನು ಪಡೆಯುವುದು ಮುಂದಿನ ಪೀಳಿಗೆ ಇವರನ್ನು ಅನುಸರಿಸುವುದರಿಂದ ಮತ್ತು ಅನುಸರಿಸುವ ಮೂಲಕ ಭಾರತೀಯ ಕಲೆಯ ದಿಕ್ಕನ್ನು ಬೇರೊಂದೆಡೆಗೆ ಸಾಗಿಸುತ್ತಿರುವುದರಿಂದ ಈ ನಿಟ್ಟಿನಲ್ಲಿ ಇಂದು ಯುವ ಪೀಳಿಗೆಯ ಹಲವಾರು ಕಲಾವಿದರು ಈ ಹೊಸ ಪಂಥದಲ್ಲಿ ತಮ್ಮ ಕೃತಿರಚನೆಯಲ್ಲಿ ತೊಡಗಿಕೊಂಡಿದ್ದಾರೆ. ಬೆಂಗಳೂರು ಹಾಗು ಮೈಸೂರು ನಗರಗಳಲ್ಲಿ ಕೇಂದ್ರೀಕರಿಸಲ್ಪಟ್ಟಿವೆ. ರಮೇಶ್, ರಾಘವೇಂದ್ರ, ಸುರೇಖಾ, ಶಾಂತಿ ಮೊದಲಾದವರು ಪ್ರಾಮುಖ್ಯತೆಯನ್ನು ಪಡೆಯುತ್ತಿದ್ದಾರೆ. ಪ್ರಕಾಶ್ ಬಾಬುರಂತಹ ಕಲಾವಿದರು 'ವಸ್ತು'ಗಳನ್ನು ಅಸಾಧಾರಣ ಪ್ರತಿಮೆಗಳನ್ನಾಗಿಸುವ ಮೂಲಕ ತಮ್ಮ 'ಒರಿಜಿನಾಲಿಟಿ'ಯನ್ನು ಕಾಯ್ದುಕೊಳ್ಳುತ್ತಾರೆ.

ಗುಲ್ಬರ್ಗಾದಲ್ಲಿ ಸಿತಾನ್ಸು ಮುಖ್ಯೋಪಾಧ್ಯಾಯ ಅವರು 'ಬಳಸುವಿಕೆ'ಯ ವಿಧಾನವನ್ನು ಬೋಧನೆಯಲ್ಲಿ ಅಳವಡಿಸಿಕೊಂಡಿದ್ದಾರೆ. ಇದರಿಂದ ವಿದ್ಯಾರ್ಥಿಗಳಿಗೆ 'ವಸ್ತು'ಗಳ

ಪರಿಚಯವಾಗುತ್ತದೆ. 'ವಸ್ತು'ಗಳನ್ನು ಚಿತ್ರಭಾಷೆಯಾಗಿ ಅಳವಡಿಸಿಕೊಂಡು ಹಲವು ಪದರಗಳಲ್ಲಿ ಅರ್ಥೈಸಿಕೊಳ್ಳಲು ಅನುವು ಮಾಡಿಕೊಡುತ್ತಿದ್ದಾರೆ. ದಿಲ್ಲಿಯಲ್ಲಿ ವೇದ್ ನಯ್ಯರ್, ಗೋಗಿ ಸರೋಜ್ ಪಾಲ್ ಮೊದಲಾದವರು ಸ್ಥಾಪನಾ ಕಲೆಯನ್ನು ವಿವಿಧ ಹಂತಗಳಲ್ಲಿ ಜನಪ್ರಿಯಗೊಳಿಸುತ್ತಿದ್ದಾರೆ. ರಿಮ್ಜ್ಜಿನ್ ಅವರ ಇತ್ತೀಚಿನ ಕೃತಿಗಳನ್ನು ಆಳವಾಗಿ ವಿಶ್ಲೇಷಿಸಬೇಕಾಗಿದೆ. ಮದರಾಸಿನಲ್ಲಿ ಡಗ್ಲಾಸ್, ಇಂದ್ರಪ್ರಮಿತ್‌ರಾಯ್ ಮೊದಲಾದವರ ಕೃತಿಗಳು ಹೊಸ ಹೆಜ್ಜೆಯಲ್ಲಿ ಗಾಢವಾದ ಅನುಭವಗಳನ್ನು ಕೊಡುತ್ತವೆ.

ಅನೀಷ್ ಕಪೂರ್ ಇಂದು ಇಂಗ್ಲೇಂಡ್ ಮತ್ತು ಯೂರೋಪ್‌ನಲ್ಲಿ ಬಹಳ ಪ್ರಸಿದ್ಧಿ ಪಡೆದ ಒಬ್ಬ ಕಲಾವಿದ. ಭಾರತೀಯ ಸಂಜಾತ. ಮೂಲತಃ ಶಿಲ್ಪಿಯಾಗಿರುವ ಇವರು ಪೋಸ್ಟ್ ಮಾರ್ಡನ್ ತತ್ವಗಳನ್ನು ತಮ್ಮ ಕೃತಿ(Installation)ಗಳಲ್ಲಿ ಅದ್ಭುತ ರೀತಿಯಲ್ಲಿ ಪ್ರದರ್ಶಿಸಬಲ್ಲವರು. ಭಾರತೀಯ ಪರಂಪರೆಯಿಂದ, ಸಂಸ್ಕೃತಿಯಿಂದ, ಮಿಥ್‌ನಿಂದ ಇವರು ತಮ್ಮ ಕೃತಿಗಳಿಗೋಸ್ಕರ ಎರವಲು ಪಡೆಯುತ್ತಿದ್ದಾರೆ. ಇವರ ಕೃತಿಗಳು ಯೂರೋಪ್‌ಗೇ ಅಪರೂಪವಾಗಿ ಬೆಳೆಯುತ್ತವೆ. ಎರಡು ವರ್ಷಗಳಿಗೊಮ್ಮೆ ನಡೆಯುವ ಪ್ರಸಿದ್ಧ ವೆನಿಸ್ ಕಲಾಪ್ರದರ್ಶನದಲ್ಲಿ ಇಂಗ್ಲೇಂಡನ್ನು ಪ್ರತಿನಿಧಿಸಿರುತ್ತಾರೆ( ಭಾರತೀಯರೆಲ್ಲ ಎರಡನೆಯವರು, ಮೊದಲನೆಯವರು ರಜ್ಹಾ ಫ್ರಾನ್ಸ್ ದೇಶವನ್ನು ಪ್ರತಿನಿಧಿಸಿದ್ದು) ಎಂದರೆ ಅವರ ಪ್ರಾಮುಖ್ಯತೆಯನ್ನು ನಾವು ಮನದಟ್ಟುಮಾಡಬಹುದು.

ಎರಡು ವರ್ಷಗಳ ಕೆಳಗೆ ಗುಲ್ಬರ್ಗಾದ ಅಂತರಾಷ್ಟ್ರೀಯ ಕಾರ್ಯಗಾರವೊಂದಕ್ಕೆ ಬಂದಿದ್ದ ವಿನ್ಸೆಂಟ್ ಲಿಯೋ ಎಂಬ ಸಿಂಗಾಪೂರದ ಕಲಾವಿದ ಎರಡು ಕ್ಯಾನ್‌ವಾಸ್‌ಗಳನ್ನು ಪಡಕೊಂಡು ಬಣ್ಣಗಳ ಬದಲು ಸೆಗಣಿಯನ್ನು ಸಾರಿಸಿ ಒಂದರ ಮೇಲೆ 'Love' ಎಂದೂ ಇನ್ನೊಂದರ ಮೇಲೆ 'Friendship'ಎಂದೂ ಬರೆಯುತ್ತಾನೆ. ಅದನ್ನು ಬೇರೆ ಭಾಷೆಗಳಲ್ಲೂ ಬರೆಸುತ್ತಾನೆ. ನಮಗದು ಹುಚ್ಚುಚ್ಚಾಗಿ ಕಾಣುವುದು ಸಹಜ. ಸೆಗಣಿಯನ್ನು ಒಂದೆಡೆ ಎಷ್ಟು ಪವಿತ್ರವೆಂದು ಭಾವಿಸುತ್ತೇವೆಯೋ, ಇನ್ನೊಂದೆಡೆ ಅಷ್ಟೇ ನಿಕೃಷ್ಟವಾಗಿ ನೋಡುತ್ತೇವೆ. ಬಣ್ಣಬಳಿಯಬೇಕಾದ ಕ್ಯಾನ್‌ವಾಸ್ ಮೇಲೆ ಸಗಣಿ ಬಳಿದಾಗ ಹಾಸ್ಯಾಸ್ಪದವೆನ್ನಿಸುತ್ತದೆ. ಕ್ಯಾನ್‌ವಾಸ್ ಕೆಟ್ಟುಹೋಯಿತಲ್ಲ ಎಂದು ದುಃಖವಾಗುತ್ತದೆ. ಅನರ್ಥಕಾರಿ ಅನ್ನಿಸುತ್ತದೆ. ಈ ಬಗ್ಗೆ ಕಲಾವಿದನನ್ನು ಪ್ರಶ್ನಿಸಿದಾಗ, ಲಿಯೋ ಪ್ರಕಾರ ಆ ಕೃತಿಗಳು ಆತನ 'ಭಾರತವೆಂಬ ಅನುಭವ'-ನಮ್ಮ ಪರಂಪರೆಯಿಂದ ಎರವಲು ಪಡೆದಿರುವುದು. ಜನಪದರು, ಹಳ್ಳಿಯ ಜನ ಇಂದಿಗೂ ಹಸುವಿಗೆ ಕೊಡುವ ಪವಿತ್ರ ಸ್ಥಾನ, ಸೆಗಣಿಯನ್ನು ಸಾಂಪ್ರದಾಯಿಕವಾಗಿ ನಿತ್ಯಜೀವನದ ವಿವಿಧ ಹಂತಗಳಲ್ಲಿ ಬಳಸುವ ಕ್ರಮ, ಬೆರಣಿ ಮಾಡುವುದು, ಮನೆಗಳ ಗೋಡೆಗಳಿಗೆ ನೆಲಗಳಿಗೆ ಅಂಗಳಗಳಿಗೆ ಸಾರಿಸುವ ಕ್ರಮ, ಆದರ ಶುದ್ಧತೆ ಇತ್ಯಾದಿ ಆತನನ್ನು ಆಕರ್ಷಿಸಿದೆ. ಇಲ್ಲಿ ಆತನ ಕೃತಿ ನಮ್ಮ ಪರಂಪರೆಯ ಕುರಿತು ಇರುವ ಆತನ ಆಸಕ್ತಿಯನ್ನು ಪ್ರದರ್ಶಿಸುತ್ತದೆ.

ಒಬ್ಬ ಕಲಾವಿದ ಒಂದು ನಿರ್ದಿಷ್ಟ ಕಾಲದಲ್ಲಿ ಮುಖ್ಯನಾಗುವುದು, ಕಲಾಸಕ್ತರ ವಿಶ್ವಾಸ ಪಾತ್ರನಾಗುವುದು - ಒಂದು ನಿರ್ದಿಷ್ಟ ಅವಧಿಯಲ್ಲಿ, ವೈಯಕ್ತಿಕ ನೆಲೆಯಲ್ಲಿ ಉದ್ದೇಶಿತ ಮಾರ್ಗವನ್ನು ಕಂಡುಕೊಳ್ಳುವ, ತಕ್ಕ ರೀತಿಯನ್ನು ಅನುಸರಿಸಿದಾಗ.

ಅತ್ತ ಪಾಪ್ ಕಲಾವಿದರು, ಕೀಫರ್, ಬಸೆಲಿಟ್ಸ್, ಪೆಂಕ್‌ರಂತಹ ಕಲಾವಿದರು, ಶ್ನಾಬೆಲ್, ಕಪೂರ್‌ರಂತಹ ಒಂದು ಸಿದ್ಧ ತಾತ್ವಿಕ ನೆಲೆಯಲ್ಲಿ ತಮ್ಮ ರಾಷ್ಟ್ರೀಯ ಪಾರಂಪರಿಕ, ಐತಿಹಾಸಿಕ, ಪೌರಾಣಿಕ, ಇತ್ಯಾದಿ ನೆಲೆಗಳನ್ನು ಹರಸುತ್ತಾ ತಮ್ಮನ್ನು ಒಂದು ಅಭಿವ್ಯಕ್ತಿ ಮಾಧ್ಯಮದ ಸಹಾಯದಿಂದ ಅರ್ಥೈಸಿಕೊಳ್ಳುತ್ತಿರಬೇಕಾದರೆ, ಇಲ್ಲಿ ನಮ್ಮ ದೌರ್ಬಲ್ಯಗಳನ್ನು, ನಮ್ಮ ಶಕ್ತಿಯನ್ನು ಆಧುನಿಕೋತ್ತರ ಸಂದರ್ಭದಲ್ಲಿ ಕಲಾವಿದರಾಗಿ ನಮಗೆ ಎಷ್ಟರವರೆಗೆ ಎಳೆಯಲು ಸಾಧ್ಯವಿದೆ ಎಂಬುದರ ಮೇಲೆ ನಿಂತಿದೆ ನಮ್ಮ ಗೆಲುವು.

ಇಂದು ಕಲೆ ಹಾಗೂ ಜನಸಾಮಾನ್ಯರ ನಡುವೆ ಭಾರೀ ಅಂತರವಿದೆ. ಇಂದಿನ ಸಮಕಾಲೀನ ಕಲೆಯು ಜನಸಾಮಾನ್ಯರಿಗೆ ಅರ್ಥವಾಗದಿರುವುದೇ ಇದಕ್ಕೆ ಕಾರಣ ಎಂದು ಹಲವರ ಅಭಿಪ್ರಾಯ. ದೃಶ್ಯ ಕಲೆಗಳನ್ನು ಆಸ್ವಾದಿಸುವ ದೃಷ್ಟಿಯಿಂದ ನಮ್ಮ ಸಾಮಾನ್ಯ ಶಿಕ್ಷಣದಲ್ಲೂ ಗಂಭೀರ ಪ್ರಯತ್ನಗಳು ನಡೆಯುತ್ತಿಲ್ಲ. ಅಂತೆಯೇ ಈ ಕೊರತೆಗಳನ್ನು ಸ್ವಲ್ಪವಾದರೂ ತುಂಬುವುದು ಈ ಜನಪ್ರಿಯ ಕಲಾಮಾಲಿಕೆಯ ಆಶಯ. ಹೀಗೆ ಸಾಮಾನ್ಯರಿಗೆ ದೃಶ್ಯಕಲೆಗಳ ಪ್ರಾಥಮಿಕ ಜ್ಞಾನ ಒದಗಿಸುವ ದೃಷ್ಟಿಯಿಂದಲೇ ಇದನ್ನು ರೂಪಿಸಲಾಗಿದೆ. ಇದರಲ್ಲಿ ದೃಶ್ಯಕಲೆಯ ತಾತ್ವಿಕ ಅಂಶಗಳು, ಮಾಧ್ಯಮಗಳು, ತಂತ್ರಗಳು, ಇತಿಹಾಸ, ಆಧುನಿಕ ಕಲಾ ಪಂಥಗಳು ಇತ್ಯಾದಿ ಹಲವು ವಿಷಯಗಳನ್ನು ಕುರಿತಂತಹ ಹೊತ್ತಿಗೆಗಳನ್ನು ತರುತ್ತಿದ್ದೇವೆ. ತನ್ಮೂಲಕ ದೃಶ್ಯಕಲೆಯನ್ನು ಆಸ್ವಾದಿಸುವ ದಿಸೆಯಲ್ಲಿ ಹೆಚ್ಚಿನ ಜನರು ತೊಡಗುತ್ತಾರೆಂಬ ಮಹತ್ವಾಕಾಂಕ್ಷೆ ಈ ಮಾಲಿಕೆಯದು. ಹೀಗೆ ಜನರನ್ನು 'ಸಹೃದಯ' ರನ್ನಾಗಿಸುವ ದಿಸೆಯಲ್ಲಿ ಇದೊಂದು ಪುಟ್ಟ ಪ್ರಯತ್ನ.

**ಎಚ್. ಎ. ಅನಿಲಕುಮಾರ್**

ಸಂಪಾದಕರು